"ಸಖೀಗೀತ ... ೕಘದೂತ" : ಒಂದು ಅಧ್ಯಯನ

ಈ ಸಂಪ್ರ... ನ್ನಡ ವಿಶ್ವವಿದ್ಯಾಲಯಕ್ಕೆ

ಡಾ॥ ಅನ್ನಪೂರ್ಣ,
ಕನ್ನಡ ಉಪನ್ಯಾಸಕರು,
ನ್ಯಾಷನಲ್ ಕಾಲೇಜು, ಬಸವನಗುಡಿ,
ಬೆಂಗಳೂರು-560 004
ಇವರ ಮಾರ್ಗದರ್ಶನದಲ್ಲಿ

ಸಮರ್ಪಿಸಿದವರು :
ವಿ.ಅನ್ನಪೂರ್ಣ






# ಹಂಪಿ ಕನ್ನಡ ವಿಶ್ವವಿದ್ಯಾಲಯ

ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ

2008-09

# "ಸಖೀಗೀತ" ಮತ್ತು "ಮೇಘದೂತ" : ಒಂದು ಅಧ್ಯಯನ

ಈ ಸಂಪ್ರಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಎಂ.ಫಿಲ್., ಪದವಿಗಾಗಿ
ಸಮರ್ಪಿಸಲಾಗಿದೆ

ಡಾ|| ಅನ್ನಪೂರ್ಣ,
ಕನ್ನಡ ಉಪನ್ಯಾಸಕರು,
ನ್ಯಾಷನಲ್ ಕಾಲೇಜು, ಬಸವನಗುಡಿ,
ಬೆಂಗಳೂರು–560 004
ಇವರ ಮಾರ್ಗದರ್ಶನದಲ್ಲಿ




ಸಮರ್ಪಿಸಿದವರು :
ವಿ.ಅನ್ನಪೂರ್ಣ



ಹಂಪಿ ಕನ್ನಡ ವಿಶ್ವವಿದ್ಯಾಲಯ
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ
2008–09

817

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮೂಲಕ **"ಸಖೀಗೀತ್" ಮತ್ತು "ಮೇಘದೂತ್" : ಒಂದು ಅಧ್ಯಯನ** ಎಂಬ ಎಂ.ಫಿಲ್. ಸಂಪ್ರಬಂಧವನ್ನು **ವಿ.ಅನ್ನಪೂರ್ಣ** ಎಂಬ ವಿದ್ಯಾರ್ಥಿನಿಯು ನನ್ನ ಮಾರ್ಗದರ್ಶನ ಹಾಗೂ ಪರಿವೀಕ್ಷಣೆಯಲ್ಲಿ ಬರೆದು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಮರ್ಪಿಸುತ್ತಿದ್ದಾರೆ.

ಈ ಸಂಪ್ರಬಂಧವನ್ನು ಈ ಹಿಂದೆ ಬೇರೆ ಯಾವುದೇ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿಲ್ಲ ಹಾಗೂ ಎಲ್ಲಿಯೂ ಪ್ರಕಟಗೊಂಡಿರುವುದಿಲ್ಲ. ಈ ಸಂಪ್ರಬಂಧವನ್ನು **ಎಂ.ಫಿಲ್.,** ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಮರ್ಪಿಸುತ್ತಿದ್ದಾರೆ.

ಸ್ಥಳ: ಬೆಂಗಳೂರು

ದಿನಾಂಕ: 15/09/10

(signature)

**ಡಾ|| ಅನ್ನಪೂರ್ಣ**, ಮ್ಮ. ಸಿ. ಬಿ

ಕನ್ನಡ ಉಪನ್ಯಾಸಕರು,

ನ್ಯಾಷನಲ್ ಕಾಲೇಜು, ಬಸವನಗುಡಿ,

ಬೆಂಗಳೂರು-560 004

817

# ದೃಢೀಕರಣ ಪತ್ರ

ವಿ.ಅನ್ನಪೂರ್ಣ ಆದ ನಾನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮೂಲಕ **"ಸಖೀಗೀತ್" ಮತ್ತು "ಮೇಘದೂತ್" : ಒಂದು ಅಧ್ಯಯನ** ಎಂಬ ಎಂ.ಫಿಲ್. ಸಂಪ್ರಬಂಧವನ್ನು **ಡಾ॥ ಅನ್ನಪೂರ್ಣ**, ಕನ್ನಡ ಉಪನ್ಯಾಸಕರು, ನ್ಯಾಷನಲ್ ಕಾಲೇಜು, ಬಸವನಗುಡಿ, ಬೆಂಗಳೂರು-560 004 ಇವರ ಮಾರ್ಗದರ್ಶನದಲ್ಲಿ ಬರೆದು ವಿಶ್ವವಿದ್ಯಾಲಯಕ್ಕೆ ಸಮರ್ಪಿಸುತ್ತಿದ್ದೇನೆ. ಈ ಪ್ರಬಂಧವನ್ನು ನಾನು ಸ್ವತಂತ್ರವಾಗಿ ಬರೆದಿರುತ್ತೇನೆ. ಈ ಸಂಪ್ರಬಂಧವನ್ನು ಈ ಹಿಂದೆ ಬೇರೆ ಯಾವುದೇ ವಿಶ್ವವಿದ್ಯಾಲಯಕ್ಕೆ ಸಮರ್ಪಿಸಿಲ್ಲ ಹಾಗೂ ಎಲ್ಲಿಯೂ ಪ್ರಕಟಗೊಂಡಿರುವುದಿಲ್ಲ. ಈ ಸಂಪ್ರಬಂಧವನ್ನು **ಎಂ.ಫಿಲ್., ಪದವಿಗಾಗಿ** ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಮರ್ಪಿಸುತ್ತಿದ್ದೇನೆ.

ಸ್ಥಳ: ಬೆಂಗಳೂರು

ದಿನಾಂಕ: 15/09/10

ಅನ್ನಪೂರ್ಣ. ವಿ

**ವಿ.ಅನ್ನಪೂರ್ಣ**

ಎಂ. ಫಿಲ್ ವಿದ್ಯಾರ್ಥಿನಿ

# ಕೃತಜ್ಞತೆಗಳು

"ಸಖೀಗೀತ್" ಮತ್ತು "ಮೇಘದೂತ" : ಒಂದು ಅಧ್ಯಯನ ಎಂಬ ಸಂಪ್ರಬಂಧ ನನ್ನ ಆಯ್ಕೆಯಾಗಿದ್ದು, ಇದನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಮೂಲಕ ಅಧ್ಯಯನ ಮಾಡಲು ಅವಕಾಶ ನೀಡಿದಂತಹ ಕಾವ್ಯ ಮಂಡಲ ನಿರ್ದೇಶಕರಾದಂತಹ **ಶ್ರೀ ಕಿ.ರಂ.ನಾಗರಾಜು** ಇವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಈ ಸಂಪ್ರಬಂಧವನ್ನು ಬರೆಯುವಾಗ ನನಗೆ ಸೂಕ್ತ ಸಲಹೆ, ಸೂಚನೆಗಳನ್ನು ಕೊಟ್ಟು, ಮಾರ್ಗದರ್ಶನ ನೀಡಿದ ಮಾರ್ಗದರ್ಶಕರಾದ **ಡಾ॥ ಅನ್ನಪೂರ್ಣ**, ಕನ್ನಡ ಉಪನ್ಯಾಸಕರು, ನ್ಯಾಷನಲ್ ಕಾಲೇಜು, ಬಸವನಗುಡಿ, ಬೆಂಗಳೂರು-560 004 ಇವರಿಗೂ ಸಹ ನನ್ನ ಮನಃಪೂರ್ವಕ ವಂದನೆಗಳು.

ಈ ಸಂಪ್ರಬಂಧವನ್ನು ಸಿದ್ಧಗೊಳಿಸಲು ನೆರವಾದ ನನ್ನ ಎಲ್ಲಾ ಗುರುಗಳಾದ ಮುಕುಂದ್ ರಾಜ್, ವೆಂಕಟೇಶ್ ಮೂರ್ತಿ, ನಟರಾಜ್ ಹುಳಿಯಾರ್ ಇವರುಗಳಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ಕೊನೆಯದಾಗಿ ನನ್ನ ಅಧ್ಯಯನದ ಅವಧಿಯಲ್ಲಿ ನನಗೆ ಬೆಂಬಲವಾಗಿ ನಿಂತಂತಹ ನನ್ನ ಪತಿ **ಎಸ್.ಸುಬ್ರಮಣ್ಯ** ಇವರಿಗೂ ಸಹ ನನ್ನ ಕೃತಜ್ಞತೆಗಳು.

ಸ್ಥಳ : ಬೆಂಗಳೂರು

ದಿನಾಂಕ : 15/09/10

ಅನ್ನಪೂರ್ಣ.ವಿ

**ವಿ.ಅನ್ನಪೂರ್ಣ**

ಎಂ.ಫಿಲ್. ವಿದ್ಯಾರ್ಥಿನಿ

# ಪರಿವಿಡಿ

1. ಅಧ್ಯಾಯ – ಒಂದು

ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ತಾತ್ವಿಕ ಸ್ವರೂಪ

2. ಅಧ್ಯಾಯ – ಎರಡು

ಭಾಷಿಕ – ಸ್ವರೂಪ

3. ಅಧ್ಯಾಯ – ಮೂರು

'ಸಖೀಗೀತ' ಮತ್ತು 'ಮೇಘದೂತ'ದ ವಸ್ತು ಮತ್ತು ಆಶಯ

4. ಅಧ್ಯಾಯ – ನಾಲ್ಕು

ವಸ್ತು ವಿನ್ಯಾಸ ಮತ್ತುಸೌಂದರ್ಯಾನುಭವ

5. ಅಧ್ಯಾಯ – ಐದು

ಬೇಂದ್ರೆ ಕಾವ್ಯದಲ್ಲಿ ಪ್ರತಿಮೆ, ರೂಪಕಗಳ ಬಳಕೆ – ಒಂದು ವಿಶ್ಲೇಷಣೆ

6. ಅಧ್ಯಾಯ – ಆರು

'ಸಖೀಗೀತ' ಮತ್ತು 'ಮೇಘದೂತ' ದಲ್ಲಿ 'ಸ್ತ್ರೀ'

7. ಸಮಾರೋಪ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಹಾಗೂ ತಾತ್ವಿಕ ಸ್ವರೂಪ

ಆಧುನಿಕ ಕವಿಗಳಲ್ಲಿ ಬೇಂದ್ರೆಯವರ ಹೆಸರು ಕಾವ್ಯ ಲೋಕದಲ್ಲಿ ಒಂದು ಶಾಶ್ವತವಾದ ನೆಲೆಗಟ್ಟನ್ನು ಸ್ಥಾಪಿಸಿದೆ. ಜೀವನವನ್ನೇ ಕಾವ್ಯವನ್ನಾಗಿ ನೋಡುವ ಬೇಂದ್ರೆಯವರ ದೃಷ್ಟಿಕೋನ ಇತರರಿಗಿಂತ ವಿಶೇಷವಾಗಿ ಕಂಡು ಬರುವುದು. 'ಪಟ್ಟ ಪಾಡೆಲ್ಲವೂ ಹುಟ್ಟು ಹಾಡಾಗುತ' ಎಂದಿರುವ ಬೇಂದ್ರೆಯವರು ವೈಯಕ್ತಿಕ ಅನುಭವಗಳನ್ನೇ ಕಾವ್ಯವಾಗಿಸಿದ್ದಾರೆ. ಸಂಶ್ಲೇಷಣಾತ್ಮಕತೆ, ಸಾಮರಸ್ಯ, ಏಕೀಭಾವಗಳನ್ನು ಅವರ ಕಾವ್ಯಗಳಲ್ಲಿ ವಿವಿಧ ನೆಲೆಗಳಲ್ಲಿ ಕಾಣಬಹುದು. ಯಾವುದೇ ಕವಿಯ ವೈಯಕ್ತಿಕ ಬದುಕು ಹಾಗೂ ಬೆಳೆದು ಬಂದ ಸಾಮಾಜಿಕ ಪರಿಸರ ಕಾವ್ಯಾಭಿವ್ಯಕ್ತಿಯ ಮೇಲೆ ಹೆಚ್ಚು ಪರಿಣಾಮವನ್ನು ಬೀರುವುದು. ಬೇಂದ್ರೆಯವರ ಕಾವ್ಯ ವಿಚಾರದಲ್ಲೂ, ಇದು ಅಷ್ಟೇ ನಿಜವಾಗಿದೆ. ತಾಯಿಯ ಪ್ರೀತಿಯ ಸೆಲೆಯಲ್ಲಿ ಬೆಳೆದ ಕವಿ ಪುರುಷನಷ್ಟೇ ಸರಿಸಮಾನವಾಗಿ ಕಾಣು ಮನೋಭಾವ ಬಾಲ್ಯದಿಂದಲೇ ಬಂದದ್ದು. ಒಲವೇ ಜೀವನದ ಅಮೃತ ಎಂಬ ತತ್ವವನ್ನು ಚಿಕ್ಕ ವಯಸ್ಸಿನಿಂದಲೇ ಮೈಗೂಡಿಸಿಕೊಂಡರು. ಕೊನೆಯವರೆಗೆ ಒಲವಿನಿಂದಲೇ ಸಮಾಜದಿಂದ ಸಖಿಯವರೆಗೂ ಎಲ್ಲರ ಮನಸ್ಸನ್ನೂ ಗೆದ್ದರು.

'ಬೆಂದರೆ ಬೇಂದ್ರೆ ಆದಾನು' ಎಂದು ಹೇಳಿರುವ ವಿಮರ್ಶಕರ ಮಾತಿನಲ್ಲಿ ಸತ್ಯವಿದೆ. ಬೇಂದ್ರೆಯವರ ಜೀವನ ಮುಳ್ಳು ತಂತಿಯ ಮೇಲೆ ನಡೆದು ಬಂದ ಹಾದಿಯಾಗಿದೆ. ಹೆಜ್ಜೆ ಇಟ್ಟಲ್ಲೆಲ್ಲಾ ಮುಳ್ಳುಗಳೇ ಕಾಣಿಸುವುದು. ಅಲ್ಲಲ್ಲಿ ಅಲೆಗಳಾಗಿ ಬಂದು ಜೀವಕ್ಕೆ ಮುದ ನೀಡುವಂತೆ ಹೆಂಡತಿಯ ಸಾನಿಧ್ಯ, ಆಕೆಯ ಪ್ರೀತಿ, ಬೇಂದ್ರೆಯವರ ಜೀವನದಲ್ಲಿ ಸ್ವಲ್ಪ ಮಟ್ಟಿಗಾದರೂ ಕ್ಷಣಿಕ ಕಾಲವಾದರೂ ಸಂತೋಷ ತಂದಿದ್ದಾದರೆ ಅದು ಅವರ ಸಖಿಯಿಂದ ಎಂಬುದನ್ನು ಅವರ ಕಾವ್ಯಗಳೇ ಹೇಳುತ್ತವೆ. ಬೇಂದ್ರೆ ಕಾವ್ಯಗಳು ಜೀವನದ ಅನುಭವದ ಪುಟಗಳಾಗಿದ್ದು, ಸುಖದುಃಖಗಳನ್ನು ತೆರೆದಿಡುವ ಒತ್ತಿಗೆಗಳಾಗಿವೆ. ಹೋರಾಟವೇ ಜೀವನವಾಗಿದ್ದು ಬೇಂದ್ರೆಯವರಿಗೆ ಕಷ್ಟಗಳ ವಿರುದ್ಧ ಕಾಳಗ ಬದುಕಿನುದ್ದಕ್ಕೂ ನಡೆಯುತ್ತಲೇ ಇತ್ತು. ಬದುಕಿನ ಅನುಭವಗಳೇ ಅವರ ಕಾವ್ಯಗಳಾಗಿದ್ದು, ಕಾವ್ಯ ರಸಿಕರಿಗೆ ರಸದೂಟವನ್ನು ಉಣಿಸಿದ್ದಾರೆ. ಬದುಕೊಂದು ಸಮರ, ಅದನ್ನು ಜಯಿಸಿ ಮುಂದೆ ನಡೆದಾಗ ಸುಖವುಂಟು ಎಂಬುದು ಅವರ ಕಾವ್ಯಗಳ ತಾತ್ಪರ್ಯವಾಗಿದೆ.

ಬೇಂದ್ರೆಯವರು ವಿಭಿನ್ನ ಮತಗಳ ಸಮಾಜಕ್ಕಾಗಿ ಕಾವ್ಯ ರಚಿಸಿದವರಲ್ಲ. ಅವರ ಕಾವ್ಯ ಸ್ವಾಭಾವಿಕ ಕ್ರಿಯೆಯಾಗಿದ್ದು, ಕಾವ್ಯ ರಚಿಸುವಾಗ ಅದರ ಮುಂದಿನ ಭವಿಷ್ಯವನ್ನು ಯೋಚಿಸಿ ಬರೆದಿರುವುದರಿಂದ ಅದು ಎಲ್ಲಾ ಕಾಲಕ್ಕೂ ಬೇಕಾಗಿರುವಂತಹ ಕಾವ್ಯವಾಗಿದೆ. ಸಮಾಜದ ಆಸೆ, ಆಕಾಂಕ್ಷೆಗಳನ್ನು ಮತ್ತು ಸಮಾಜದ ಸುಪ್ತ ಚಿತ್ತದಲ್ಲಿನ ಆಸೆ-ಆಕಾಂಕ್ಷೆಗಳೆರಡನ್ನೂ ಅವರ ಕಾವ್ಯದಲ್ಲಿ ಕಾಣಬಹುದು. ಇದಕ್ಕೆ ಸಾಕ್ಷಿಯಾಗಿ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ನಿಲ್ಲುತ್ತವೆ. ಬೇಂದ್ರೆಯವರು ಜನತೆಯ ಕವಿಯಾಗಿದ್ದು, ಅವರ ಕಾವ್ಯಗಳಲ್ಲಿ ಸಾಮಾನ್ಯ ಜನರ ಅನುಭವಗಳೇ ಕಾಣವುದು. ಅವರ ಕಾವ್ಯದಲ್ಲಿ ವಿಕಾಸವಿದೆ, ಸೃಜನಶೀಲತೆ ಇದೆ ಮತ್ತು ಸೌಂದರ್ಯವೂ ತುಂಬಿದೆ. ಬದುಕಿನ ಒಟ್ಟು ಒಳನೋಟವನ್ನು ಅವರ 'ಸಖೀಗೀತ' ಕಾವ್ಯದಲ್ಲಿ ಹಿಡಿದಿಟ್ಟಿದ್ದಾರೆ.

ಜಂಜಾಟಗಳೇ ಜೀವನವಾಗಿದ್ದಾಗ ಸುಖದ ದಾರಿಯನ್ನು ಕಂಡುಕೊಳ್ಳುವ ಬಗೆ ಎಷ್ಟು ಸರಳ ಎನ್ನುವ ಮಟ್ಟಕ್ಕೆ ಬೇಂದ್ರೆಯವರು ತಮ್ಮ ಕಾವ್ಯಗಳನ್ನು ಕೊಂಡೊಯ್ದಿದ್ದಾರೆ. ಬೇಂದ್ರೆಯವರ ಕಾವ್ಯವು ಸಾಮಾನ್ಯ ಮನುಷ್ಯನ ಬದುಕಿಗೆ ಸಂಬಂಧಪಟ್ಟಿರುವುದು. ಸಮಸ್ಯೆಗಳ ಪ್ರವಾಹದಲ್ಲಿ ಈಜಲು ಬಾರದ ಅದೆಷ್ಟೋ ಬದುಕುಗಳು ಜಲಸಮಾಧಿಯಾಗಿವೆ. ಇಂತಹ ಬದುಕುಗಳಿಗೆ ಚೈತನ್ಯ, ಹೊಸ ಉತ್ಸಾಹ ತುಂಬುವ ಸ್ಥಾನಗಳನ್ನು ಬೇಂದ್ರೆಯವರ 'ಸಖೀಗೀತ' ಮತ್ತು 'ಮೇಘಧೂತ' ಕಾವ್ಯಗಳು ಮಾಡಿವೆ.

'ಸಖೀಗೀತ'ದಲ್ಲೂ ಕವಿಯು ತನ್ನ ವೈಯಕ್ತಿಕ ಜೀವನದಲ್ಲಿ ಅನುಭವಿಸಿದ ದಾಂಪತ್ಯ ಜೀವನದ ಸುಖ-ದುಃಖಗಳನ್ನು ಕಾವ್ಯದ ಮೂಲಕ ಪೋಣಿಸಿದ್ದಾರೆ. ಮುಖ್ಯವಾಗಿ ತನ್ನಾಕೆಯನ್ನು ಅಗಲಿದ್ದ ಆ ಕ್ಷಣಗಳು ಕವಿಯ ಬದುಕಿನಲ್ಲೇ ಶೂನ್ಯವಾದ ಕ್ಷಣಗಳು, ಬದುಕಿಗೆ ಸಖಿ ಅಥವಾ ಅರ್ಧಾಂಗಿ ಎಷ್ಟು ಮುಖ್ಯ ಎಂಬ ಅಂಶವನ್ನು ಕವಿಯು ಕಂಡುಕೊಳ್ಳುವ ಕ್ಷಣಗಳೂ ಇದಾಗಿದೆ. ಅದೇ ರೀತಿ ಬೇಂದ್ರೆಯವರ 'ಮೇಘಧೂತ' ಕಾವ್ಯದಲ್ಲೂ ಪತಿ-ಪತ್ನಿಯರ ಸಂಬಂಧದ ಮಹತ್ವವನ್ನೇ ತಿಳಿಸುತ್ತದೆ. ಪ್ರಿಯತಮೆಯನ್ನು ಅಗಲಿದ್ದ ಆ ಕ್ಷಣಗಳು ಎಷ್ಟೊಂದು ಕ್ರೂರ, ಶೂನ್ಯ ಎನ್ನುವ ಅಂಶವನ್ನೇ ವ್ಯಕ್ತಪಡಿಸುತ್ತದೆ.

ಅಲಂಕಾರಗೊಂಡ ಮದುವೆ ಮಂಟಪದಂತೆ ಸಾಮಾನ್ಯ ಸಂಗತಿಯನ್ನು ತನ್ನ ವಿಶೇಷವಾದ ಪದಗುಚ್ಛಗಳಿಂದ ವಿಶಿಷ್ಟಗೊಳಿಸಿದ್ದಾರೆ. ಬದುಕಿನ ಕೆಲವೊಂದು ಸಂಗತಿಗಳು ಮನುಷ್ಯನ ಅರಿವನ್ನು ಮೀಟದೆ ಜಡತ್ವದಲ್ಲೇ ಶೇಖರವಾಗುವುದು. ಈ ಜಡತ್ವಕ್ಕೆ ಜೀವಂತಿಕೆಯನ್ನು ತುಂಬುವ ಮಹಾನ್ ಕಾರ್ಯವನ್ನು ಬೇಂದ್ರೆಯವರು ಮಾಡಿದ್ದಾರೆ.

ಪ್ರತಿಯೊಬ್ಬ ಮನುಷ್ಯನು ಬದುಕಿನ ಅಂತ್ಯದವರೆಗೂ ಸಂಬಂಧಗಳನ್ನು ವಿವಿಧ ರೂಪದಲ್ಲಿ ಜೋಡಿಸಿಕೊಳ್ಳುತ್ತಾ ಸಾಗುವನು. ಇದರಲ್ಲಿ ಪತಿ-ಪತ್ನಿಯರ ಸಂಬಂಧ ಹೊಸದಾಗಿ ನಿರ್ಮಾಣವಾದ ಸೇತುವೆಯಂತೆ, ಬದುಕೆಂಬ ಸಮುದ್ರವನ್ನು ದಾಟಲು ಈ ಸೇತುವೆ ಗಟ್ಟಿಗೊಳ್ಳಬೇಕು. ಅದಕ್ಕಾಗಿ ಪ್ರೀತಿಯೆಂಬ ಮಳೆ ಅತ್ಯವಶ್ಯಕವಾಗಿದೆ. ಇಂತಹ ಮಧುರವಾದ, ಸವಿಯಾದ, ಪವಿತ್ರವಾದ ಪ್ರೀತಿಯನ್ನು ಬೇಂದ್ರೆಯವರ ಈ ಎರಡೂ ಕಾವ್ಯಗಳಲ್ಲಿ ಕಾಣಬಹುದು.

ಒಲವೇ ನಮ್ಮ ಬದುಕು
ಬಳಸಿಕೊಂಡವದನೆ ನಾವು
ಅದಕು ಇದಕು ಎದಕು . . . . . . .

ಎಂಬ ತಮ್ಮ ಜೀವನದ ನೌಕೆ ಸಾಗುತ್ತಿದ್ದದ್ದು ಈ ಒಲವಿನ ಸಾಗರದ ಮೇಲೆಯೇ ಎಂದು ಇವರ ಅನೇಕ ಕಾವ್ಯಗಳು ಚಿತ್ರಿಸುತ್ತವೆ. ಬದುಕಿನ ಉದ್ದಕ್ಕೂ ನೋವಿನ ಊಟವನ್ನು ತಿಂದು ಬಂದ ಬೇಂದ್ರೆಯವರಿಗೆ 'ಪ್ರೀತಿ' ಎನ್ನುವುದು ಜೀವದ ಅಮೃತವಾಗಿತ್ತು, ಅವರ ಉತ್ಸಾಹ, ಚೇತನ, ಸಂತೋಷ, ಗೆಲುವು ಎಲ್ಲವೂ ಇದರಲ್ಲೇ ಗುಪ್ತವಾಗಿತ್ತು, ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಬೇಂದ್ರೆಯವರು ಅಜ್ಜಿ ಮತ್ತು ತಾಯಿಯ ಪ್ರೀತಿ ಮತ್ತು ಹಾರೈಕೆಯಲ್ಲಿಯೇ ಬೆಳೆದರು. ಮಾತೃವಾತ್ಸಲ್ಯ ಅವರನ್ನು ಪ್ರೀತಿಯ ಆಳದಲ್ಲಿ ಇಳಿದು ಅರ್ಥೈಸಿಕೊಳ್ಳಲು ಸಹಾಯ ಮಾಡಿತು. ಜೊತೆಗೆ ಗೆಳೆಯರ ಸಂಘವು ಅವರ ಬದುಕಿನ ಒಂದು ಭಾಗದ ಒಡನಾಟವಾಗಿಯೇ ಬೆಳೆಯಿತು. ಪ್ರಾರಂಭದಿಂದ ಕೊನೆಯವರೆಗೆ ದುಃಖದ ನೀರನ್ನೇ ಕುಡಿಯುತ್ತಾ ಬಂದ ಬೇಂದ್ರೆಯವರಿಗೆ ಒಲವು ಸಹಜವಾಗಿ ಅಮೃತ ಸೇವನೆಯೇ ಆಯಿತು. 'ಪಟ್ಟ ಪಾಡೆಲ್ಲವೂ ಹುಟ್ಟು ಹಾಡಾಗುತ್ತಾ' ಎಂದು ಹೇಳಿರುವ ಬೇಂದ್ರೆಯವರು ಬದುಕಿನ ಪ್ರತಿಯೊಂದು ಅನುಭವವನ್ನು ಕಾವ್ಯವನ್ನಾಗಿಸಿದ್ದಾರೆ. ತಮ್ಮ ಬದುಕಿನ ಅತ್ಯಂತ ಮಧುರವಾದ ಕ್ಷಣಗಳನ್ನು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ಛಿತ್ತರಿಸಿದ್ದಾರೆ. ಪ್ರೀತಿ ಬೇಂದ್ರೆಯವರ ಬದುಕಿನಲ್ಲಿ ಅತ್ಯಂತ ಮಹತ್ವವಾದದ್ದು. ಮನುಷ್ಯನ ಬದುಕಿಗೆ ಅತ್ಯವಶ್ಯಕವಾಗಿ ಬೇಕಾಗಿರುವುದು ಪ್ರೀತಿ. ಅದು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದಾಗ ತನ್ನ ಜೀವನದ ಅತ್ಯಂತ ಕಹಿ ಘಟನೆಗಳನ್ನೂ ಜೀರ್ಣಿಸಿಕೊಂಡು ಬದುಕು ಸುಸೂತ್ರವಾಗಿ ಸಾಗಲು ಸಾಧ್ಯ. ಬೇಂದ್ರೆಯವರ ಅತೀ ಹೆಚ್ಚು ಕಾವ್ಯಗಳಲ್ಲಿ ಪ್ರೀತಿಯೇ ವಸ್ತುವಾಗಿದೆ. 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ವಸ್ತು ಪ್ರೀತಿಯೇ ಆಗಿದ್ದು, ಬೇಂದ್ರೆಯವರು ಅದನ್ನು ವಿವಿಧ ಅರ್ಥಗಳಲ್ಲಿ ವಿವರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಸಿಹಿ-ಕಹಿಗಳ ರಸಮೂಟವನ್ನೇ ಅಲ್ಲಿ ಉಣಬಡಿಸುತ್ತಾರೆ. ದಾಂಪತ್ಯ ಜೀವನದ

ನೋವು-ನಲಿವುಗಳು ಅಲ್ಲಿ ನಿರೂಪಿಸಲಾಗಿದೆ. ಬೇಂದ್ರೆಯವರು ಬಾಲ್ಯಜೀವನದಿಂದ ಒಡಿದು ಸಖ್ಯದ ಸಾನಿಧ್ಯದವರೆಗೂ ನಮ್ಮನ್ನು ಕೊಂಡೊಯ್ಯುವುದು. 'ಸಖೀಗೀತ' ಒಂದು ಕೌಟುಂಬಿಕ ಕಾವ್ಯವಾಗಿದ್ದು, ಸಾಮಾಜಿಕ ಚೌಕಟ್ಟಿನಲ್ಲಿಯೇ ಪ್ರೇಮ ಚಿಗುರಿ ಹೂವಾಗುವುದನ್ನು ಹೇಳಿದ್ದಾರೆ.

ಬೇಂದ್ರೆಯವರ ಕಾವ್ಯ ಜೀವನದಷ್ಟೇ ಗಂಭೀರವಾಗಿಯೂ, ಭೀಕರವಾಗಿಯೂ, ಮಧುರವಾಗಿಯೂ ಇರುತ್ತದೆ. ಜೀವನಕ್ಕೆ ಹೆಚ್ಚು ಸಾಮೀಪ್ಯ ಎನಿಸುವ ಇವರ ಕಾವ್ಯಗಳು ಭಾವಗಳನ್ನು ಭಟ್ಟಿ ಇಳಿಸಿ ಅದಕ್ಕೆ ಉಪಮೆ ರೂಪಕಗಳ ಜೋಡಣೆ ಮಾಡಿ, ನಾದ, ಲಯಗಳ ಅಲಂಕಾರದೊಂದಿಗೆ ಒಂದು ಉತ್ತಮ ಕಾವ್ಯವನ್ನು ರಚಿಸುತ್ತಾರೆ.

ವಾಸ್ತವ ಜೀವನದಲ್ಲಿ ನಾವು ಬರೀ ಬಿರುಕು-ಬಿಡಿ ದೃಶ್ಯಗಳನ್ನೇ ಕಾಣುತ್ತೇವೆ. ಬೇಂದ್ರೆ ಕಾವ್ಯವು ಈ ಬಿರುಕು ಪ್ರತ್ಯೇಕತೆಯ ವಿರುದ್ಧವಾಗಿ ಹೋರಾಡಿದೆ. ಒಗ್ಗೂಡುವ ಬಯಕೆ ನೆಲೆದೋರಿದೆ. ಬದುಕಿಗೆ ಉತ್ಸಾಹ, ನವಚೇತನ, ಸಖೀತ್ವದ ನೆಲೆಯಲ್ಲಿ ಪರಕಾಯ ಪ್ರವೇಶ ಮಾಡಿದಂತಹ ಅನುಭವ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಉಂಟುಮಾಡುತ್ತವೆ. ಇವರ ಕಾವ್ಯಗಳು ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಯಕ್ತಿಕ ಜೀವನವನ್ನು ವಿಶ್ಲೇಷಿಸಿಕೊಳ್ಳುವ ಮಟ್ಟಕ್ಕೆ ಏರಿಸುವುದು. ಪ್ರತಿಯೊಬ್ಬ ವ್ಯಕ್ತಿಯ ಆನಂದ ಅವನ ಕೈಯಲ್ಲಿಯೇ ಇದ್ದು ಅವನು ಜೀವನವನ್ನು ನೋಡುವ ದೃಷ್ಟಿಕೋನದಲ್ಲಿ ಎಲ್ಲವೂ ಅಡಗಿರುವುದು. ಕಾಮ, ಕ್ರೋಧ, ಬಯಕೆ ಎಂಬುದು ದೇವ-ಮಾನವ ಲೋಕದಲ್ಲಿ ಸಮಾನ ಎಂಬ ತತ್ವವನ್ನು ಬೇಂದ್ರೆಯವರ ಕಾವ್ಯಗಳಲ್ಲಿ ಕಾಣುತ್ತೇವೆ.

ಬೇಂದ್ರೆಯವರ ಕಾವ್ಯಗಳಲ್ಲಿ ಪ್ರಣಯ ಸರಳವಾದುದಲ್ಲ, ಬೇಂದ್ರೆಯವರು ಹೆಣ್ಣನ್ನು ನೋಡುವ ದೃಷ್ಟಿಯೇ ಸಂಕೀರ್ಣವಾದುದು. ಬದುಕಿಗೆ ಹೆಣ್ಣು ಸಖಿಯಾಗಿ ಜೊತೆಯಾದಾಗ ಆ ಬದುಕು 'ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸ' ಎಂಬಂತೆ ಜೀವನದ ಹೊಸತಿರುವಿಗೆ ಕಾರಣವಾಗುವುದು.

ಸಖೀಗೀತ ಓದಿದಾಗಲೆಲ್ಲಾ ಹೊಸ ಹೊಸ ಅನುಭವಗಳನ್ನು ಕೊಡುತ್ತದೆ. ಬದುಕಿನ ಅನೇಕ ದೃಷ್ಟಿಕೋನಗಳನ್ನು ಅದು ತೆರೆದಿಡುತ್ತದೆ. ಇವರ ಕಾವ್ಯಗಳಲ್ಲಿ ಶೃಂಗಾರ ಅಥವಾ ಪ್ರಣಯ ಎಂಬುದು ಸೀಮಿತ ದೃಷ್ಟಿಕೋನಕ್ಕೆ ಕೊನೆಯಾಗದೇ ಸಮಷ್ಟಿ ನೆಲೆಗೆ ಸಾಗುವುದನ್ನು ಕಾಣುತ್ತೇವೆ. ಇವರ ಪ್ರಣಯ ಗೀತೆಗಳು ಸರಳವಾಗಿರದೆ ಸಂಕೀರ್ಣವಾಗಿದ್ದು, ಅನೇಕ ಸೈದ್ಧಾಂತಿಕ, ತತ್ವ ವಿಚಾರಗಳಿಂದ ಒಂದು ನಿರ್ಧಿಷ್ಟ ಆಕೃತಿಯನ್ನು ಪಡೆದುಕೊಂಡಿವೆ. ಇವರ ಕಾವ್ಯಗಳು ಲಿಂಗಭೇದದಿಂದ ದೂರವಿದ್ದು ಒಟ್ಟಾರೆ ದಾಂಪತ್ಯ ಜೀವನದ ಸೌಂದರ್ಯವನ್ನು

ತೆರೆದಿಡುತ್ತದೆ. ಇವರ ಎಲ್ಲಾ ಕಾವ್ಯಗಳು ಮುಖ್ಯವಾಗಿ ವೈಯಕ್ತಿಕ ಅನುಭವಗಳಾಗಿದ್ದರೂ ಬೇಂದ್ರೆಯವರು ಸಮಾಜವನ್ನು ಕುರಿತೇ ಹೇಳಿದ್ದಾರೆ.

'ಸಖೀಗೀತ' ಮತ್ತು 'ಕನ್ನಡ ಮೇಘದೂತ' ಕಾವ್ಯಗಳ ಭಾಷೆ ಸರಳ ಸಾಮಾನ್ಯವಾದುದು. ಜನರಾಡುವ ಭಾಷೆಯನ್ನೇ ತನ್ನ ಕಾವ್ಯಭಾಷೆಯಲ್ಲಿ ಬಳಸಿಕೊಂಡಿರುವುದರಿಂದ ಓದುಗರಿಗೆ ಸುಲಭವಾಗಿ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಹಾಡಿಗೆ ತಕ್ಕ ನಾದ, ಲಯ, ಶೃತಿ ಎಲ್ಲವನ್ನು ಹೊಂದಿಸುವ ಬೇಂದ್ರೆಯವರು, 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲೂ ಶಬ್ಧ ಭಂಡಾರಕ್ಕೆ ಯಾವುದೇ ಕೊರತೆಯಾಗದಂತೆ ಯತೇಚ್ಛವಾಗಿ ಬಳಸಿಕೊಂಡಿದ್ದಾರೆ.

ಮನುಷ್ಯನಿಗೆ ಬಡತನ ಎದುರಾದಾಗ ಜೀವನದ ದಿಕ್ಕು ತಪ್ಪುತ್ತದೆ. ಸಮಸ್ಯೆಗಳ ಒಡನಾಟಗಳಲ್ಲಿ 'ಪ್ರೀತಿ'ಯನ್ನೇ ಕಳೆದುಕೊಳ್ಳುವ ಮನುಷ್ಯ ಸುಖ, ಶಾಂತಿ, ನೆಮ್ಮದಿ ಇಲ್ಲದೇ ಹಸಿವು, ಅನ್ನ, ವಸತಿ ಇಂತಹ ಸಮಸ್ಯೆಗಳ ಸುಳಿಯಲ್ಲೇ ತಿರುಗುವಂತಾಗುವುದು. ಕವಿ ಇಂತಹ ಸಮಸ್ಯೆಗಳ ಸುಳಿಯನ್ನು ಈಜಿ ದಡ ಸೇರಿದುದರ ಕಥೆಯೇ 'ಸಖೀಗೀತ'ವಾಗಿದೆ. ಇದಕ್ಕೆ ಪ್ರತಿ ಮುಖ ಎಂಬಂತೆ 'ಮೇಘದೂತ' ಕಾವ್ಯವು ರಚನೆಯಾಗಿದೆ. ಸಮಾಜಕ್ಕೆ ಮಾದರಿಯಾಗಿ ನಿಲ್ಲುವ ಈ ಎರಡೂ ಕಾವ್ಯಗಳು ಬೇಂದ್ರೆಯವರ ಪ್ರಣಯಗೀತೆಗಳಲ್ಲಿ ವಿಶಿಷ್ಟ ಸ್ಥಾನಗಳಿಸಿ ರಸಿಕರ ಹೃದಯ ಶ್ರೀಮಂತಿಕೆಗೆ ಪಾತ್ರವಾಗಿವೆ.

'ಸಖೀಗೀತ' ಕಾವ್ಯವು ಆದರ್ಶ ದಾಂಪತ್ಯ ಜೀವನವನ್ನು ತೋರಿಸುತ್ತಲೇ ಕವಿಯು ತನ್ನನ್ನು ತಾನೇ ಆತ್ಮ ವಿಶ್ಲೇಷಣೆಗೆ ಒಡ್ಡುವ ಸಂದರ್ಭಗಳನ್ನೂ ಕಾಣುತ್ತೇವೆ. ಸತಿಯನ್ನು ಸಖಿಯಾಗಿ ಕಂಡು ನೊಂದು ಬೆಂದ ಜೀವಗಳೆರಡೂ ಆ ಸಖತ್ವದಲ್ಲಿ ದುಃಖವನ್ನು ಮರೆಯುವ ಪರಿಯನ್ನು ಕವಿ ಚಿತ್ರಿಸಿದ್ದಾರೆ. ವಿವಾಹವಾದ ನಂತರ ಚೊಚ್ಚಲ ಮಗನನ್ನೇ ಕಳೆದುಕೊಂಡು, ದುಃಖಿತಳಾದ ತನ್ನ ಸತಿಯನ್ನು ಸಂತೈಸುವ ಸಾಲುಗಳು ಒಬ್ಬ ಸಖ-ಸಖಿಯನ್ನು ಸಮಾಧಾನಪಡಿಸುವ ರೀತಿಯಲ್ಲಿ ಬಣ್ಣಿಸಲಾಗಿದೆ. ಈ ಕಾವ್ಯದಲ್ಲಿ ಸರಸ, ವಿರಸಗಳೆರಡೂ ಸಮರಸವಾಗಿ ಕೂಡಿಕೊಂಡಿವೆ. 'ಸಖೀಗೀತ' ಮತ್ತು 'ಮೇಘದೂತ' ದ ವಸ್ತುವು 'ಕಾಮ' ಅಥವಾ 'ವಿರಹ' ವಾಗಿದ್ದು, ಸತ್ಯ, ಆನಂದ ಮತ್ತು ಸೌಂದರ್ಯವೆಂಬ ಶಾಶ್ವತ ವಿಷಯಗಳಾಗಿ ಬೇಂದ್ರೆ ಕಾವ್ಯದಲ್ಲಿ ಕಾಣಿಸಿಕೊಂಡಿವೆ. ಜೀವನ ದಿವ್ಯವಾಗಬೇಕಾದರೆ ಕಾಮ ದುಷ್ಕಾಮವಾಗದೆ ದಿವ್ಯ ಪ್ರೇಮವಾಗಬೇಕೆಂದುಬು ಕವಿಯ ಉದ್ದೇಶವಾಗಿದೆ. ಇಲ್ಲಿನ ಸಖ-ಸಖಿಯರ 'ವಿರಹ' ಅಥವಾ 'ಅಗಲಿಕೆ' ಸಮಾಜದ ಚೌಕಟ್ಟಿನಲ್ಲಿದ್ದು, 'ಆದರ್ಶ

ದಾಂಪತ್ಯ ಜೀವನ'ದ ಸ್ವರೂಪವನ್ನು ವ್ಯಕ್ತಪಡಿಸುತ್ತದೆ. 'ಮೇಘದೂತ' ಕಾವ್ಯದಲ್ಲಿ ಶಾಪದಿಂದ ಬೇರೆಯಾದ ಯಕ್ಷ-ಯಕ್ಷಿಯರಲ್ಲಿ ಅಗಲಿಕೆ ಉಂಟಾಗಿ ಯಕ್ಷ, ಯಕ್ಷಿಯನ್ನು ನೆನೆಸಿಕೊಂಡು ಆಕೆಯನ್ನು ಕೂಡುವ ಬಯಕೆಯಿಂದ ಬಳಲುತ್ತಾ ತನ್ನ ಮನದಾಸೆಯನ್ನು ತನ್ನಾಕೆಗೆ ತಿಳಿಸಲೆಂದು ಮೋಡವನ್ನು ಸಂದೇಶವಾಹಕನಾಗಿ ಕಳುಹಿಸುತ್ತಾನೆ. ಅಲಕಾವತಿಗೆ ಹೋಗುವಾಗ ಎದುರಾಗುವ ಪ್ರತಿಯೊಂದು ವಸ್ತುವನ್ನು ಯಕ್ಷ ಚಿತ್ರಿಸುತ್ತಾ ಹೋದಂತೆ ಪ್ರಕೃತಿಯ ಸೌಂದರ್ಯ ರಾಶಿಯೇ ನಮ್ಮ ಕಣ್ಣ ಮುಂದೆ ಪ್ರತಿಬಿಂಬಿತವಾಗುವುದು. ಕವಿ ತನ್ನ ವೈಯಕ್ತಿಕ ಅನುಭವವನ್ನೇ ಹೇಳಿರುವುದರಿಂದ 'ಕನ್ನಡ ಮೇಘದೂತ'ದ ಘನತೆ ಹೆಚ್ಚಿದೆ ಎಂದು ಡಾ|| ಬಿ.ಬಿ.ರಾಜಪುರೋಹಿತರು ಅಭಿಪ್ರಾಯಪಟ್ಟಿದ್ದಾರೆ. 'ಸಖೀಗೀತ'ದಂತೆ ಇಲ್ಲಿನ ವಸ್ತುವು ಮುಖ್ಯವಾಗಿ ಕವಿಯ ಅನುಭವಗಳನ್ನೇ ಆಧರಿಸಿ ಸೃಷ್ಟಿಯಾಗಿರುವಂತದ್ದು. ಸಖೀಗೀತದಲ್ಲಿಯೂ ಕವಿ ತನ್ನ ವೈಯಕ್ತಿಕ ಜೀವನದ ಅನುಭವವನ್ನೇ ಹೇಳಿದ್ದು, ಅಲ್ಲಿನ 'ವಿರಹ' ನೊಂದು, ಬೆಂದು ಬೇರೆಯಾದ ಜೀವಗಳದ್ದಾಗಿದೆ. ಆದರೆ ಎರಡೂ ಕಾವ್ಯಗಳು ಪ್ರೇಮ ತತ್ವಗಳನ್ನೇ ಹೇಳುತ್ತವೆ. ಎರಡೂ ಕಾವ್ಯಗಳಲ್ಲಿ ಇರುವಂತಹ ಆದರ್ಶವು ಒಂದೇ ಆಗಿದೆ. ಕವಿ ಎಲ್ಲಿಯೂ ಆಭಾಸವಾಗುವಂತಹ ವರ್ಣನೆಯನ್ನು ಮಾಡಿಲ್ಲ. ಒಟ್ಟಾರೆ ಈ ಎರಡೂ ಕಾವ್ಯಗಳನ್ನು ತುಲನಾತ್ಮಕವಾಗಿ ವಿಮರ್ಶಿಸಿ ಇವೆರೆಡು ಕಾವ್ಯಗಳ ನಡುವಿನ ಸಾಮರಸ್ಯವನ್ನು ಗುರುತಿಸುವುದೇ ಈ ಅಧ್ಯಯನದ ಉದ್ದೇಶವಾಗಿದೆ.

**ತಾತ್ವಿಕ ಸ್ವರೂಪ:**

ಸಖೀಗೀತ ಮತ್ತು ಮೇಘದೂತದ ವಸ್ತು 'ಕಾಮ' ಅಥವಾ 'ವಿರಹ' ವಾಗಿದ್ದು, ಅದರ ಸಂದೇಶವು ಪ್ರೇಮಿಗಳ ವಿರಹ, ಅವರ ಹೃದಯ ಪ್ರೇಮ ಪರಿಪಾಕದಿಂದ ದಿವ್ಯ ಪ್ರೇಮವಾಗುವ ಬಗೆಯನ್ನು ಪ್ರತಿಪಾದಿಸಿದೆ. ಕಾಮ ಎಂಬುದು ಪ್ರಕೃತಿಯ ಧರ್ಮ. ಅದು ಪಂಚಮಹಾಭೂತ, ಈ ಕಾಮಕ್ಕೆ ಸಂಭೋಗ ಮತ್ತು ವಿಪ್ರಲಂಭ (ಅಗಲುವಿಕೆ) ವಿರಹ ಎಂಬ ಪ್ರಮುಖ ವ್ಯವಸ್ಥೆ ಇದೆ. 'ವಿರಹ' ಎಂಬುದು ಎರಡು ರೂಪಗಳಲ್ಲಿ ಚಲಿಸುವಂತದ್ದು. ಒಂದು 'ಆದರ್ಶ'ವಾದ ಸಕೃತಿಯ ರೂಪದಲ್ಲಿ ಇರುವಂತದ್ದು. ಇನ್ನೊಂದು ವಿಕೃತಿಯ ರೂಪ ತಲುಪುವಂತದ್ದು. ಕಾಮವು ಪ್ರೇಮವಾಗಿ ವಿಕಾಸ ಹೊಂದಿದಾಗ ವಿಕೃತಿ ತಪ್ಪುತ್ತದೆ. ಇದೇ ಸಂಸ್ಕೃತಿಯಾಗುವುದು. ಯೌವನಾವಸ್ಥೆಯಲ್ಲಿ ಮನುಷ್ಯ ಸಹಜವಾಗಿ ವಿಕೃತಿಗೆ ಕಾರಣವಾಗುವ ಸಾಧ್ಯತೆ ಇರುತ್ತದೆ. ವಿರಹಾವಸ್ಥೆಯಲ್ಲಿ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಕಳೆದುಕೊಳ್ಳಬಾರದು. ಇಂತಹ ಸಂದರ್ಭದಲ್ಲಿ ಎಚ್ಚರದಿಂದ ತನ್ನ ಮನಸ್ಸಿನ ಮೇಲೆ ಹತೋಟಿಯನ್ನು ಸಾಧಿಸಬೇಕು ಎಂಬ ಸಂದೇಶ ಬೇಂದ್ರೆಯವರ 'ಮೇಘದೂತ' ಮತ್ತು 'ಸಖೀಗೀತ' ದ ಕಾವ್ಯಗಳಲ್ಲಿ

ವ್ಯಕ್ತವಾಗಿದೆ. ಜೀವನವನ್ನು ಎಲ್ಲಾ ನೆಲೆಗಳಲ್ಲಿಯೂ ನಡೆಸುತ್ತಿರುವ ಶಕ್ತಿ ಪ್ರಣಯ ಎಂಬುದು ಬೇಂದ್ರೆಯವರ ತಾತ್ವಿಕ ಸಿದ್ಧಾಂತವಾಗಿದೆ.

ಸಾಂಪ್ರದಾಯಿಕ ತಾತ್ವಿಕತೆಯ ಹಂದರವನ್ನೇ ಬೇಂದ್ರೆಯವರು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ. ಅನೇಕ ಕವಿಗಳು ಸಾಂಪ್ರದಾಯಿಕ ತಾತ್ವಿಕತೆಯನ್ನು ತಮ್ಮ ಬರಹದಲ್ಲಿ ಬಳಸಿಕೊಂಡೇ ಮಾನವೀಯ ಮೌಲ್ಯಗಳನ್ನು ಮೂರ್ತವಾಗಿ ವ್ಯಕ್ತಪಡಿಸಿದ್ದಾರೆ. ಬೇಂದ್ರೆಯವರ ಕಾವ್ಯಗಳು ಆದರ್ಶ ಪ್ರೇಮವನ್ನು ಸಾರುವಂತಹವಾಗಿವೆ. ಅವರ ಕಾವ್ಯಗಳಲ್ಲಿನ 'ಕಾಮ'ವು ಉನ್ನತೀಕರಣಗೊಳ್ಳುವ ಆರೋಗ್ಯಕರವಾದ ಪ್ರೇಮವಾಗಿದೆ. ಹಳೆಯ ಪುರಾಣ ಕಥೆಗಳು, ರಾಜ ಮಹಾರಾಜರ ಕಥೆಗಳು, ಅಸುರರ ಕಥೆಗಳಲ್ಲಿ ಕಾಮವು ಶೃಂಗಾರಕ್ಕೆ ಏರಿ ಅಧೋಗತಿ, ಅವನತಿ, ನಾಶವನ್ನೇ ಪ್ರತಿಪಾದಿಸುತ್ತದೆ. ಇಂತಹ ಕಾವ್ಯಗಳು ಸಮಾಜದ ಮೇಲೆಯೂ ಕೆಟ್ಟ ಪರಿಣಾಮವನ್ನುಂಟುಮಾಡುವ ಸಂಭವವಿರುತ್ತದೆ. ಯಶೋಧರ ಚರಿತೆಯಲ್ಲಿ ಅಮೃತಮತಿಯ ಪ್ರಣಯ ಪ್ರಸಂಗವು ಆದರ್ಶ ಪ್ರೇಮವಾಗದೇ ಅದು ಸಂಸ್ಕೃತಿಯ ವಿರುದ್ಧವಾದ ಮೌಲ್ಯಗಳನ್ನು ಒಳಗೊಂಡಿದೆ. ಅಮೃತಮತಿಯು ಬದಗನನ್ನು ನಿರ್ಮಲವಾದ ಮನಸ್ಸಿನಿಂದ ಬಯಸಿದರೂ ಅವಳ ವಿರಹವೇದನೆಯನ್ನು ಕುರಿತು ಜನ್ನ 'ಬೇವಂ ಮೆಚ್ಚಿದ ಕಾಗೆಗೆ ಮಾವಿಳಿದಪ್ಪಂತೆ' ಎಂದಿರುವುದು ಅಮೃತಮತಿಯ ಪ್ರೀತಿಯನ್ನು ಅಲ್ಲಗೆಳೆಯುವಂತೆ ತೋರುವುದು. ಕಾಳಿದಾಸನ ಶಾಕುಂತಲ ನಾಟಕದಲ್ಲಿ ದುಶ್ಯಂತ ಮತ್ತು ಶಾಕುಂತಲೆಯರು ಶಾಪದಿಂದ ಬೇರೆಯಾಗಿ ನರಳಿದರೂ ಮುಂದೆ ಅವರಿಬ್ಬರ ಸಮ್ಮಿಲನವಾಗುವುದು. ಅವರ ಪ್ರೇಮ, ಆದರ್ಶ ಪ್ರೇಮವಾಗಿದ್ದು, ಅಲ್ಲಿಯೂ ಸಹ ಸತ್ಯಕ್ಕಾಗಿ ನೀರಡಿಸಿ, ನಿಂತ ಸೌಂದರ್ಯದಂತೆ ದಿವ್ಯ ಪ್ರೇಮವಾಗುವುದು.

ಕಾಮ ಎಂಬುದು – ಸತ್ಯ, ಸೌಂದರ್ಯ ಮತ್ತು ಮನಸ್ಸನ್ನು ಸದಾ ಉಲ್ಲಾಸದಲ್ಲಿಡುವ ಆನಂದಮಯವಾದ ನಿರಂತರತೆಯ ಶಾಶ್ವತ ವಿಷಯ. ಬದುಕು ಪ್ರೇಮದಲ್ಲಿ ಮಿಂದು ಸುಪ್ರೇಮದ ಬದುಕಾಗಬೇಕು. ಕಾಮ ಎಂಬುದು ದುಷ್ಕಾಮವಾಗದೇ, ಅಸತ್ಯವಾಗದೇ, ಕ್ಷಣಿಕ ಸುಖವಾಗದೇ, ಶಾಶ್ವತ ಸುಖವಾಗಬೇಕು. ಇಂತಹ ತಾತ್ವಿಕ ತತ್ವಗಳನ್ನೇ ಬೇಂದ್ರೆಯವರ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಪ್ರತಿಪಾದಿಸುವಂತದ್ದು. ಇಲ್ಲಿ ಮೂಡಿ ಬಂದಿರುವ ಪ್ರೇಮ ಸಿದ್ಧಾಂತವು ನೈತಿಕತೆಯನ್ನು ವಿಜೃಂಭಿಸುತ್ತದೆ.

# ಅಧ್ಯಾಯ – ಎರಡು

## ಭಾಷಿಕ ಸ್ವರೂಪ

ಕಾಮನ ಬಿಲ್ಲಿನ ಬಣ್ಣ ಏಳು ಬಣ್ಣವಾದರೆ, ಬೇಂದ್ರೆ ಕವಿತೆಯದು ಎಂಟು. ಕವಿತೆಯು ದೇಸಿ ನುಡಿಯಲ್ಲಿದ್ದು, ಅದರಲ್ಲಿ ಅಪೂರ್ವ ಸ್ವಂತಿಕೆ ಎದ್ದು ಕಾಣುತ್ತದೆ. ಅದರ ಹೆಣಿಗೆಯಲ್ಲಿ ನಿರಾಯಾಸತೆ ಇದೆ. ಕವಿತೆ ಸೃಷ್ಟಿಯ ಅರ್ಥಕ್ಕಿರುವ ರಸೋದ್ಧೀಪಕತೆ – ಇವೆಲ್ಲಾ ಬೇಂದ್ರೆ ಕವಿತೆಯ ಕೆಲವು ಅಮೋಘ ಅಂಶಗಳು. ಲೋಕದ ಮೇಲೆ ಅಲೌಕಿಕವಾದ ಬೆಳಕು ಚೆಲ್ಲುವ ಕವಿತೆಗಳು ಅವು. ಮನುಷ್ಯನಿಗೆ ತಾನು ಆತ್ಮಶಾಲಿ, ಆನಂದಮಯ ಎನ್ನುವುದನ್ನು ನೆನಪಿಸುವಂತವು. ಲೌಕಿಕವಾದ ತಮ್ಮ ಪಾಡುಗಳನ್ನು ಹಿಂಡಿ ಅಲೌಕಿಕವಾದ ಹಾಡು ಸೃಷ್ಟಿಸಿದವರು. 'ಎನ್ನಪಾಡೆನಗಿರಲಿ ಅದರ ಹಾಡನಷ್ಟೇ ನೀಡುವೆನು ರಸಿಕ ನಿನಗೆ! ಕಲ್ಲು ಸಕ್ಕರೆಯಂಥ ನಿನ್ನೆದೆಯು ಕರಗಿದರೆ ಆ ಸವಿಯ ಹುಣಿಸು ನನಗೆ' ಎಂದು ನಾಡಿನ ಜೊತೆ ರಸ ಸಂವಾದ ಹೂಡಿದವರು.

ಬೇಂದ್ರೆಯವರ ಕವಿತೆಗಳಲ್ಲಿ ಥಳಥಳಿಸುವ ರೂಪಕಗಳು ಮೂಡಿ ಮಾತನ್ನ ನಿರ್ಧಿಷ್ಟ ಗಡಿಗಳಾಚೆಗೆ ಮೀರಿ ಬಿಡುತ್ತದೆ. 'ಮುಂಗಾರಿ ಕಣ ಸನ್ನಿ ಹಾಂಗೆ ನಿನ್ನ ನಗೆ ಚೆನ್ನಿ ಕಣ್ಗೆವಿ ತೆರೆದರೆ ಹುಟ್ಟವಿ ತೆರೆದಾಂಗ', ಪಾರಿಜಾತಗಳು ಮುದ್ದುಗರೆಯುವುವು ಹವಳ ದುಂಬಿಗಳಿಂದ – ಎಂಬ ಕಲ್ಪನೆಗಳಲ್ಲಿ ಮನುಷ್ಯ ಚರ್ಯೆಯನ್ನು ಪ್ರಕೃತಿಯ ವ್ಯಾಪಾರದ ಮೂಲಕ ದರ್ಶಿಸಿ ಚಿತ್ರಕ್ಕೆ ಕವಿಸುವ ಭವ್ಯತೆ ಇದಾಗಿದೆ. (ಸಾಹಿತ್ಯ ರತ್ನ ಸಂಪುಟ ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ). ಬೇಂದ್ರೆ ಒಬ್ಬ ಜ್ಞಾನದ ಖನಿ, ಬೇಂದ್ರೆಯವರ ಕಾವ್ಯ ಸರ್ವ ವ್ಯಾಪಕವಾದದ್ದು. ರಾಮಚಂದ್ರ ಶರ್ಮಾರವರು ಬೇಂದ್ರೆಯವರ ಕಾವ್ಯಗಾರಿಕೆಯನ್ನು ಜ್ಞಾನದ ಖನಿ ಎಂದು ಕರೆದಿದ್ದಾರೆ. ಬೇಂದ್ರೆಯವರ ಕಾವ್ಯಗಾರಿಕೆಯು ಸರ್ವವ್ಯಾಪ್ತಿ ಮತ್ತು ಪಕ್ವವಾದದ್ದು.

'ಪ್ರಾಸಾನು ಪ್ರಾಸಗಳ ವ್ಯೂಹವನ್ನು ಸೃಷ್ಟಿಸುವುದು ಮತ್ತು ಮಾತನಾಡುವುದು ಅವರಿಗೆ ಸಹಜವಾಗಿದೆ' ಎಂದಿರುವ ಶರ್ಮರವರ ಮಾತಿನಲ್ಲಿ ಸತ್ಯವಿದೆ (ಪ್ರತಿಭಾ ಸಂದರ್ಶನ, ರಾಮಚಂದ್ರ ಶರ್ಮ). ಬೇಂದ್ರೆಯವರು ಮಾತನಾಡುವ ಶೈಲಿ ಮತ್ತು ಕಾವ್ಯ ಸೃಷ್ಟಿ ಇವುಗಳ ಹಿಂದೆ ಯಾವುದೋ ಒಂದು ಆವೇಶ ಕೆಲಸ ಮಾಡುತ್ತದೆ ಎಂದು ತೋರುತ್ತದೆ ಎಂದು ವಾಮನ ಬೇಂದ್ರೆಯವರು ಹೇಳಿದ್ದಾರೆ (ಪುಸ್ತಕ – ಶ್ರೀ ಬೇಂದ್ರೆಯವರ

ಜೀವನ ಪರಿಚಯ, ಡಾ॥ ವಾಮನ ಬೇಂದ್ರೆ). ಬೇಂದ್ರೆಯವರ ಕಾವ್ಯದಲ್ಲಿ ಜಾನಪದ ಸತ್ವದೊಂದಿಗೆ ಅಪೂರ್ವವಾದ ನಾಗರೀಕ ಪರಿಷ್ಕಾರವಿದೆ. 'ಬೇಂದ್ರೆಯವರ ಕಾವ್ಯ, ಸಂಸ್ಕಾರಕ್ಕಿಂತ ದೊಡ್ಡದು' ಎಂದಿದ್ದಾರೆ ಕೀರ್ತಿನಾಥ ಕುರ್ತಕೋಟಿಯವರು. ಭರತನ ನಾಟ್ಯಶಾಸ್ತ್ರದಲ್ಲಿ ಉಲ್ಲೇಖವಾಗಿರುವಂತೆ ಬೇಂದ್ರೆಯವರ ಕಾವ್ಯದಲ್ಲಿ ನವರಸಗಳ ಪಾಕವು ಸೃಷ್ಟಿಯಾಗಿರುತ್ತದೆ.

ಬೇಂದ್ರೆ ಕಾವ್ಯದ ಭಾಷೆ ಸರಳವಾದದ್ದು, ಆಡು ಭಾಷೆಯನ್ನು ಬೇಂದ್ರೆ ಕಾವ್ಯಕ್ಕೆ ಬಳಸಿಕೊಂಡಿದ್ದಾರೆ ಎಂಬ ಅನೇಕ ವಿಮರ್ಶಕರ ವಾದ ನಿಜವಾದದ್ದು. ಪ್ರತಿಯೊಬ್ಬ ಕವಿಗೂ ತನ್ನದೇ ಆದ ಒಂದು ಭಾಷಾ ಶೈಲಿ ಇರುತ್ತದೆ. ಕುವೆಂಪು, ಅಡಿಗ, ಮಾಸ್ತಿಯವರು ತಮ್ಮದೇ ಆದ ಒಂದು ವಿಶಿಷ್ಟ ಭಾಷೆಯನ್ನು ಕಾವ್ಯಕ್ಕೆ ಬಳಸಿಕೊಳ್ಳುತ್ತಾರೆ. ಬೇಂದ್ರೆಯವರ ಭಾಷಾ ಸ್ವರೂಪವನ್ನು ಕುರಿತು ಹೇಳುವುದಾದರೆ ಮಾತೃ ಭಾಷೆ ಮರಾಠಿಯಾಗಿದ್ದರೂ ತಾವು ಹುಟ್ಟಿ ಬೆಳೆದ ತಾಯ್ನಾಡಿನ ಭಾಷೆಯಲ್ಲೇ ಕವಿತೆಗಳನ್ನು ರಚಿಸಿದ್ದಾರೆ. ದೇಸಿ ನುಡಿಯಲ್ಲಿ ತಮ್ಮ ಸ್ವಂತಿಕೆಯನ್ನು ತುಂಬಿಸಿ ಕಾವ್ಯದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ. ಸಾಮಾನ್ಯವಾಗಿ ಭಾಷೆ ಗ್ರಾಂಥಿಕವಾದರೆ ಅದು ತನ್ನ ಸತ್ವವನ್ನು ಕಳೆದುಕೊಳ್ಳುತ್ತದೆ. ಆದ್ದರಿಂದಲೇ ಬೇಂದ್ರೆಯವರು ಆಡು ಮಾತನ್ನು, ಗ್ರಾಮ್ಯ ಶೈಲಿಯನ್ನು ಕಾವ್ಯ ರಚನೆಯಾಗಿ ಆಯ್ಕೆಮಾಡಿಕೊಂಡರು. ಜಾನಪದ ಶೈಲಿಯನ್ನು ತಮ್ಮ ಕಾವ್ಯದಲ್ಲಿ ಪಡಿ ಮೂಡಿಸುವ ಮೂಲಕ ಬೇಂದ್ರೆಯವರು ಸಾಮಾನ್ಯ ಜನರ ಮನಸ್ಸಿನ ಪಾತಳಿಗಳಲ್ಲಿ ಇಂದಿಗೂ ಉಳಿದುಕೊಂಡಿದ್ದಾರೆ. ಉದಾಹರಣೆಗೆ 12ನೇ ಶತಮಾನದ ವಚನ ಸಾಹಿತ್ಯ ಸರ್ವಕಾಲಿಕವಾಗಿದೆ. ಇಂದಿಗೂ ಜನರ ಮನಸ್ಸನ್ನು ನಾನಾ ಬಗೆಯಲ್ಲಿ ಸೂರೆ ಮಾಡುವಂತಹ ಸಾಹಿತ್ಯ ಸಂಪತ್ತಾಗಿದೆ. ಕಾವ್ಯ ಭಾಷೆಯು ಅರ್ಥವನ್ನು ಮೀರಿ ಭಾವವನ್ನು ಮೂಡಿಸುವುದಕ್ಕೆ ಪ್ರಯತ್ನಿಸುತ್ತದೆ. ಆದರೆ, ಬೇಂದ್ರೆ ಕಾವ್ಯದಲ್ಲಿ ತರ್ಕಕ್ಕಿಂತ ಧ್ವನಿ ತರ್ಕ ಪ್ರಧಾನವಾಗಿರುತ್ತದೆ. ಬೇಂದ್ರೆಯವರ ಕಾವ್ಯತರ್ಕವನ್ನು ಮೀರಿ ಒಂದು ಸುಂದರವಾದ ಭಾವ ಲೋಕವನ್ನು ನಿರ್ಮಿಸುತ್ತದೆ. ಕವಿ, ಕಾವ್ಯವನ್ನು ಕಾವ್ಯವಾಗಿ ಕಾಣದೆ ಅದನ್ನು ಒಂದು ಬದುಕಾಗಿ ಕಂಡಿರುವುದೇ ಇಲ್ಲಿನ ಕಾವ್ಯದ ವಿಶೇಷ.

ಬೇಂದ್ರೆಯವರು ಬರೆಯುವ ಕಾಲಕ್ಕೆ ಕಾವ್ಯ ಎಂಬುದು ಎರಡು ರೂಪಗಳಲ್ಲಿ ಜೀವಂತವಾಗಿತ್ತು ಎಂದು ಕುರ್ತಕೋಟಿಯವರು ಅಭಿಪ್ರಾಯ ಪಡುತ್ತಾರೆ. ಮೊದಲನೆಯದಾಗಿ ಹಳೆಯ ಷಟ್ಪದೀ ಕಾವ್ಯಗಳು ಆಗಿನ ವಿದ್ಯಾವಂತರಲ್ಲಿ ಬಹು ಪ್ರಚಲಿತವಾಗಿದ್ದವು. ಎರಡನೆಯದಾಗಿ ಜಾನಪದ ಗೀತೆಗಳಲ್ಲಿ ಒಂದು ಬಗೆಯ ಕಾವ್ಯ ಇನ್ನೂ ಜೀವಂತವಾಗಿತ್ತು. ಈ ಎರಡೂ ಬಗೆಯ ಕಾವ್ಯಗಳನ್ನು ಬೆಸೆದು ಬೇಂದ್ರೆಯವರು ಅದನ್ನು ತಮ್ಮ ಕಾವ್ಯದ

ಭಾಷೆಯನ್ನಾಗಿ ಮಾಡಿಕೊಂಡರು. ಬೇಂದ್ರೆಯವರಿಗೆ ಸಂಸ್ಕೃತ ಮತ್ತು ಇಂಗ್ಲೀಷ್ ಭಾಷೆಗಳ ಆಳವಾದ ಪರಿಚಯವಿತ್ತು. ಆದರೂ ಅವರು ಆಡು ಭಾಷೆಯನ್ನೇ ತಮ್ಮ ಕಾವ್ಯ ಭಾಷೆಯನ್ನಾಗಿ ಮಾಡಿಕೊಂಡಿರುವುದು ವಿಶಿಷ್ಟವಾಗಿದೆ. ಅವರ ಕವಿತೆಗಳು ಈ ಕಾರಣದಿಂದ ಜನರ ಹಾಗೂ ವಿಮರ್ಶಕರ ಪ್ರಶಂಸೆಗೆ ಕಾರಣವಾಯಿತೆನ್ನಬಹುದು. ಬೇಂದ್ರೆಯವರು ಜಾನಪದ ಕಾವ್ಯ ಸತ್ವವನ್ನು ಜೀರ್ಣಿಸಿಕೊಂಡ ಕವಿ ಎಂದೇ ವಿಖ್ಯಾತಿಯಾಗಿದ್ದಾರೆ.

ಅದ್ಭುತದ ಉದ್ಭವದ ಭಾವ ಭಾಷಾಂತರಿಸಿ
ಹೊಸ ಒಸಗೆಗನುವಾಗಿ ಒಗ್ಗಿ ವೇಷಾಂತರಿಸಿ
ತಾ ಶೈಲಿ ಎಂದೊರೆವೆ ಕರ್ಮನಟಿಯನುಕರಿಸಿ
ಅವಳ ಪದಹತಿಗೆ ಎದ್ದಾವು ಛಂದದ ಬಳ್ಳಿ
ಮಧುವಾತಾಋತಾಯತೇ

ಉದ್ಭವದ ಭಾವವನ್ನು ಭಾಷಾಂತರಿಸಿ ಹೊಸ ಒಸಗೆಗೆ ತಕ್ಕಂತೆ ಅದನ್ನು ವೇಷಾಂತರಿಸುವ ಕುಶಲ ಕರ್ಮವನ್ನು ಬೇಂದ್ರೆಯವರು ಇಲ್ಲಿ ಶೈಲಿ ಎಂದು ಕರೆದಿದ್ದಾರೆ. 'ಅವಳ ಪದಹತಿಗೆ ಎದ್ದಾವು ಛಂದದ ಬಳ್ಳಿ' ಎನ್ನುವಲ್ಲಿ ಕಾವ್ಯದ ಭಾಷೆಗೂ ಛಂದಸ್ಸಿಗೂ ಇರುವ ಸಂಬಂಧವನ್ನು ತಿಳಿಸುತ್ತದೆ. ಬೇಂದ್ರೆಯವರಲ್ಲಿ ಜಾನಪದವಾದ ಭಾಷೆ ಒಂದು ನಿಶ್ಚಿತವಾದ ಉದ್ದೇಶಕ್ಕಾಗಿ ಉಪಯೋಗವಾಗುತ್ತದೆ. ಅಂದರೆ ಅದನ್ನು ತಮ್ಮ ಕವಿತೆಗಳಲ್ಲಿ ಜೀವಂತವಾದ ಮತ್ತು ತನ್ನದೇ ಆದ ಮೌಲ್ಯಗಳ ಜಗತ್ತನ್ನು ನಿರ್ಮಿಸುವುದು ಸಖೀಗೀತ ಕಾವ್ಯದುದ್ದಕ್ಕೂ ಈ ರೀತಿಯ ಜೀವಂತಿಕೆಯೂ ಪುಟಿಯುತ್ತಲೇ ಇರುವುದು.

ಹೆಜ್ಜೆ ಹೆಜ್ಜೆಗೂ ಓದುಗರನ್ನು ಎಚ್ಚರಿಸುವ ಬದುಕಿನ ತಿರುಳನ್ನು ಬಿಚ್ಚಿಡುವ ಕೆಲಸವನ್ನು ಬೇಂದ್ರೆಯವರು ಮಾಡಿದ್ದಾರೆ. ಮೇಘದೂತ ಕಾವ್ಯವು ಮೂಲತಃ ಕಾಳಿದಾಸನದಾಗಿದ್ದು, ಸಂಸ್ಕೃತ ಭಾಷೆಯಲ್ಲಿ ರಚಿತವಾಗಿರುವಂತದ್ದು. ಬೇಂದ್ರೆಯವರು ಸಂಸ್ಕೃತ 'ಮೇಘದೂತ' ವನ್ನು ಕನ್ನಡ 'ಮೇಘದೂತ' ವಾಗಿ ಬರೆದಿದ್ದಾರೆ. ಬೇಂದ್ರೆಯವರ 'ಮೇಘದೂತ' ಭಾಷಾಂತರವಲ್ಲ ಅದೊಂದು ಸ್ವತಂತ್ರ ರಚನೆ ಎಂದೇ ಹೇಳಬಹುದು. ಬೇಂದ್ರೆಯವರೇ ಅಭಿಪ್ರಾಯಪಡುವಂತೆ ಮೇಘದೂತ ಭಾಷಾಂತರವಲ್ಲ, ಭಾವಗ್ರಹಣ ಎಂದು ಹೇಳಿದ್ದಾರೆ. ಅವರ ಮಾತುಗಳಲ್ಲೇ ಹೇಳುವುದಾದರೆ –

ಕವಿಯ ಕಮಲಕೃತಿಯಲ್ಲಿ ಉಂಡೆ ನಾನೊಬ್ಬ ಭಾವಭೃಂಗ
ಪಕಳೆ ಮಾತು ಉದಿರಾಡಬಹುದು, ತುಂಬೀತು ಸ್ವಾಂತರಂಗ॥
ತೋಳುಗೀಳು ಸಡಲೀತು ಪ್ರಿಯರ ಸುಸ್ನಿಗ್ಧ ಬಂಧದಲ್ಲು
ಪ್ರಾಣತುಂಬುವಾ ಅಧರಪಾನ ಇಳಿದೀತೆ ಉದರದಲ್ಲು ?

‘ಮೇಘದೂತ’ವನ್ನು ಭಾಷಾಂತರ ಮಾಡುವಾಗ ಬೇಂದ್ರೆಯವರು ಕಾವ್ಯದಲ್ಲಿ ತನ್ನ ಭಾವನೆಗಳನ್ನು ತುಂಬಿದರು. ಆದರೆ ಅಲ್ಲಿ ಕಾಳಿದಾಸನ ಪರಿಸರ ಕಾಣಲು ಸಾಧ್ಯವಿಲ್ಲ. ಬೇಂದ್ರೆಯವರ ಪರಿಸರವೇ ಕಾವ್ಯದುದ್ದಕ್ಕೂ ಹರಡಿದೆ. ಡಾ॥ ಸಿ.ಪಿ.ಕೃಷ್ಣಕುಮಾರ್ ತಮ್ಮ ಅಧ್ಯಕ್ಷ ಭಾಷಣದಲ್ಲಿ ‘ಮೇಘದೂತ’ ದ ಭಾಷಾಂತರವನ್ನು ಕುರಿತು ಹೀಗೆ ಹೇಳಿದ್ದಾರೆ. ‘ಬೇಂದ್ರೆಯವರ ಪ್ರತಿಭೆ ಅದ್ಭುತವಾದದ್ದು. ಈ ಕಾರಣದಿಂದಲೇ ಅವರ ಭಾಷಾಂತರ ಕಾರ್ಯದಲ್ಲೂ ತೊಡಕು ಕಾಣುತ್ತದೆ. ಅವರು ಕಾಳಿದಾಸನ ‘ಮೇಘದೂತ’ ವನ್ನು ಕನ್ನಡಕ್ಕೆ ಅನನ್ಯವಾಗಿ ಅನುವಾದಿಸಿದ್ದಾರೆ. ಆದರೆ, ಅದು ಕಾಳಿದಾಸನ ‘ಮೇಘದೂತ’ವಾಗಿ ಉಳಿಯದೇ, ಬೇಂದ್ರೆಯವರ ‘ಮೇಘದೂತ’ ವಾಗಿಬಿಟ್ಟಿದೆ !. ಬೇಂದ್ರೆಯವರ ‘ಕನ್ನಡ ಮೇಘದೂತ’ ಅತ್ಯಂತ ಸೃಜನಾತ್ಮಕವಾದ ಭಾಷಾಂತರ ಎಂದು ಹೇಳಿದ್ದಾರೆ’ (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ : 139–140).

ಬೇಂದ್ರೆಯವರ ‘ಮೇಘದೂತ’ ಭಾಷಾಂತರ ಎಂದು ಅಭಿಪ್ರಾಯ ಪಡುವುದಕ್ಕಿಂತ ಸ್ವತಂತ್ರ ಸೃಷ್ಟಿ ಎಂದೇ ಹೇಳಬಹುದು. ಕಾಳಿದಾಸನ ಯಾವ ಸೂತ್ರಗಳನ್ನೂ, ತಂತ್ರಗಳನ್ನೂ ಬೇಂದ್ರೆ ಬಳಸಿಕೊಂಡಿಲ್ಲ. ಸರಳ ಸುಂದರವಾದ ಜಾನಪದ ಭಾಷೆಯನ್ನು ಮೇಘದೂತದಲ್ಲಿ ಬಳಸಿಕೊಂಡಿದ್ದಾರೆ. ಸಖೀಗೀತ ಮತ್ತು ಮೇಘದೂತ ಕಾವ್ಯಗಳಲ್ಲಿ ಗಮನೀಯ ವ್ಯತ್ಯಾಸಗಳೇನೂ ಕಂಡುಬರುವುದಿಲ್ಲ. ಮೂಲ ಮೇಘದೂತದ ಭಾಷಾ ಶೈಲಿಯೂ ಕನ್ನಡ ಮೇಘದೂತ ಭಾಷಾ ಶೈಲಿಗಿಂತ ಭಿನ್ನವಾಗಿದೆ. ಆದರೆ, ಶೈಲಿಯಲ್ಲಿ ಭಿನ್ನತೆ ಇದ್ದರೂ ಅಲ್ಲಿ ಸ್ಫುರಿಸಿರುವ ಯಕ್ಷನ ಭಾವನೆಗಳೂ ಒಂದೇ ಆಗಿದೆ. ಕಾವ್ಯದ ಆಶಯವೂ ಒಂದೇ ಆಗಿದೆ.

ಸಖೀಗೀತದ ಭಾಷೆಯು ಮೇಘದೂತದ ಭಾಷಾ ವಿನ್ಯಾಸಕ್ಕೆ ಸಾಮೀಪ್ಯತೆಯನ್ನು ಪಡೆದುಕೊಂಡಿದೆ. ಮೇಘದೂತ ಕಾವ್ಯವನ್ನು ಓದುವಾಗ ‘ಸಖೀಗೀತ’ ಕಾವ್ಯವನ್ನೇ ಓದುವಂತಹ ಅನುಭವ ಉಂಟಾಗುತ್ತದೆ. ಎರಡೂ ಕಾವ್ಯಗಳ ಧಾಟಿಯೂ ಜಾನಪದೀಯವೇ ಆಗಿದೆ. ಜಾನಪದೀಯರ ಬದುಕಿನ ಪರಿಸರವೇ ಇವರ ಕಾವ್ಯಗಳಲ್ಲಿ ಸಮ್ಮಿಳಿತವಾಗಿದೆ. ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲೆ (‘ಸಖೀಗೀತ’ ಪುಟ–7) ಎನ್ನುವ ಕವಿತೆಯ ಸಾಲುಗಳಲ್ಲಿ ವಸಂತ ಮಾಸಕ್ಕೂ ಕೋಗಿಲೆಗೂ ಇರುವ ಅವಿನಾಭಾವ ಸಂಬಂಧವನ್ನು ಸೂಚಿಸುತ್ತದೆ. ಜಾನಪದೀಯರ ಬದುಕಿನಲ್ಲಿ ಪ್ರಕೃತಿಯ ಒಂದೊಂದು ಭಾಗವು, ಬದುಕಿನ ಒಂದೊಂದು ಕ್ಷಣಕ್ಕೂ ಮುಖ್ಯವಾದದ್ದು ಮತ್ತು ಮಹತ್ವವಾದದ್ದು ಎನ್ನುವ ಅಂಶವನ್ನು

ಬೇಂದ್ರೆಯವರ ಈ ಮೇಲಿನ ಸಾಲುಗಳು ಹೇಳುತ್ತವೆ. ಯಥೇಚ್ಚವಾದ ಭಾಷಾ ಕಲೆಗಾರಿಕೆಯನ್ನು ಬೇಂದ್ರೆಯವರು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ. 'ಕನ್ನಡ ಮೇಘದೂತ' ಕೃತಿಯ ಮೂಲಕ ಕನ್ನಡಕ್ಕೆ ಒಂದು ಖಂಡ ಕಾವ್ಯವನ್ನು ನೀಡುವಾಗ ಇದನ್ನು ತಮ್ಮದೇ ಸೃಷ್ಟಿಯಾದ ಹೊಸ ಛಂದಸ್ಸಿನಲ್ಲಿ ರಚಿಸಿದ್ದಾರೆ. ಮಹಾಕವಿಯಾದ ಕಾಳಿದಾಸ 'ಮೇಘದೂತ' ಕಾವ್ಯ ರಚನೆಗೆ ಮಂದಕ್ರಾಂತವನ್ನು ಆಯ್ಕೆಮಾಡಿಕೊಂಡರೆ, ಮಹಾಕವಿ ಬೇಂದ್ರೆಯವರು ದೇಸಿ ಮೂಲದ ರಗಳೆಯನ್ನು 'ಕನ್ನಡ ಮೇಘದೂತ'ದ ರಚನೆಗೆ ಆಯ್ಕೆ ಮಾಡಿಕೊಂಡಿದ್ದಾರೆ. 'ಮಂದಾಕ್ರಾಂತ ವೃತ್ತದ ಬದಲು ೩ . . . . ೩ . . . . ೨ ! ಇಂತಹ ಮೂರು ಗಣಗಳುಳ್ಳ ಎಂಟು ಮಾತ್ರೆಯ ಗಣ ಮೂರು, ಕೊನೆಗೊಂದು ಗುರು, ಅಂತೂ ೨೬ ಮಾತ್ರೆಯ ಮೂರು ನಾಲ್ಕು ಕಿಂಚಿತ್ ಯತಿಗಳುಳ್ಳ ಕೊನೆಯ ಪ್ರಾಸದ ಚತುಷ್ಪಾದದ ಒಂದು ಹೊಸ 'ರಗಳೆ' ಯ ಜಾತಿಯನ್ನು ಇಲ್ಲಿ ರಚಿಸಿ ಬಳಸಿದ್ದೇನೆ' ಎಂದು ಬೇಂದ್ರೆಯವರೇ ಹೇಳಿದ್ದಾರೆ. ಮುತ್ತಿನ ತೋರಣದಂತೆ, ಮೃಧುವಾದ, ಹದವಾದ, ಸುಂದರವಾದ, ಅರ್ಥಗರ್ಭಿತವಾದ ಶಬ್ಧಗಳನ್ನು ಬೇಂದ್ರೆಯವರು ಬಳಸಿಕೊಂಡಿದ್ದಾರೆ. 'ಕಾವ್ಯ ಎನ್ನುವುದು ಕೋಲ್‌ರಿಚ್ ಹೇಳುವ ಹಾಗೆ 'best words are the best order' ಆ order ವ್ಯತ್ಯಾಸವಾದರೆ ಸ್ವಾರಸ್ಯ ಹೋಗಿ ಬಿಡುವುದು' (ಕಾಳಿದಾಸ ಪ್ರಕಾಶ ಸಿ.ಪಿ.ಕೆ. ಪುಟ ೪೩) ಬೇಂದ್ರೆಯವರ ಮೇಘದೂತ ಕಾವ್ಯವು ಈ ವ್ಯಾಖ್ಯಾನಕ್ಕೆ ಸರಿದೂಗುತ್ತದೆ. ಬೃಹತ್ತಾದ ಪದ ಸಮೂಹವು 'ಮೇಘದೂತ' ಮತ್ತು 'ಸಖೀಗೀತ' ಕಾವ್ಯದ ಸೌಂದರ್ಯವನ್ನು ಹೆಚ್ಚಿಸಿದೆ. ದೇಶೀಯ ಚೆಲುವು ಮತ್ತು ಆಡು ಮಾತನ್ನು ಕಾವ್ಯಕ್ಕೆ ಬಳಸಿಕೊಂಡಿರುವುದರಿಂದ ಕಾವ್ಯದ ಭಾಷೆಯು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಕಾವ್ಯದಲ್ಲಿ ಅಂತ್ಯಪ್ರಾಸ ಮತ್ತು ಅಲ್ಲಲ್ಲಿ ಹರಡಿರುವ ಪ್ರತಿಮೆ ರೂಪಕಗಳು ಕಾವ್ಯದ ಹೊರಮ್ಮೆ ಮತ್ತು ಒಳಮ್ಮೆಗೆ ಹೆಚ್ಚು ಹೊಳಪನ್ನು ನೀಡಿದೆ.

ಮರುಳಿದೆ ಮನೆಯತ್ತ ಮರುಳಂತೆ ನೆರಳಂತೆ
ಕರುಳೆಲ್ಲ ಕಡಲೊಳು ಕುದಿಯುತ್ತಿದೆ
ಬೆರಗಾದೆ ಬೆಪ್ಪಾದೆ ನಿಮ್ಮಿಬ್ಬರ ಅಳಲು
ಮೌನ ಮೀಟಿದ ಹಾಗೆ ನರಳುತ್ತಿರೆ

ಮರಳಂತೆ, ನೆರಳಂತೆ ಪ್ರತಿಮೆಗಳನ್ನು ಕವಿ ದುಃಖದ ಸನ್ನಿವೇಶಕ್ಕೆ ಬಳಸಿಕೊಂಡಿರುವುದು ಅರ್ಥಗರ್ಭಿತವಾಗಿದೆ. ಹಾಗೆಯೇ ಮುಂದಿನ ಸಾಲುಗಳಲ್ಲಿ ಬೆರೆತ ಮನಸ್ಸುಗಳನ್ನು ಕುರಿತು –

ನೀನು ದೊಡ್ಡವಳಾದೆ ಮೈಸಲಿಗೆ ಬೆಳಸಿದೆ
ಏಕಾಂತಕೆಳಸಿದೆ ಎಲೆ-ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆ ಬೆಳೆದವೇ . .

ಸಂಭ್ರಮ, ಹಬ್ಬ ಎನ್ನುವುದು ಸಂತೋಷದ ಸಂಕೇತವಾಗಿದೆ. ಈ ಪದಗಳು ಸಖ-ಸಖಿಯರ ತನು-ಮನಗಳ ಸಮ್ಮಿಲನದ ಸಾಂಕೇತವೂ ಆಗಿದೆ. ಹೀಗೆ ಸಂದರ್ಭಕ್ಕೆ, ಸನ್ನಿವೇಶಗಳಿಗೆ ಬೇಂದ್ರೆಯವರ ಕುಸರಿ ಕೆಲಸ ಕೈ ಜಾರದಂತೆ ನಡೆಯುತ್ತದೆ. ಅಲ್ಲಲ್ಲಿ ಬಳಸಿಕೊಂಡಿರುವ ಪ್ರತಿಮೆ ರೂಪಕಗಳು ಕೂಡ ಕಾವ್ಯಕ್ಕೆ ಒಂದು ಉತ್ತಮವಾದ ಭಾಷಿಕ ನೆಲೆಯನ್ನು ಕಲ್ಪಿಸಿಕೊಟ್ಟಿದೆ.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ಭಾಷೆಯು ವಿಮರ್ಶಕರ ಪ್ರಶಂಸೆಗೆ ಪಾತ್ರವಾಗಿದೆ. ಪ್ರಪ್ರಥಮ ಬಾರಿಗೆ 'ಕನ್ನಡ ಮೇಘದೂತ'ದ ಅವಲೋಕನವನ್ನು ಸಂಸ್ಕೃತ ಪಾಂಡಿತ್ಯವುಳ್ಳ ಶ್ರೀ ಬಿ.ಹೆಚ್.ಶ್ರೀಧರರವರು ಅವಲೋಕಿಸಿದ್ದಾರೆ. ಅವರ ಮೌಲ್ಯಮಾಪನದ ಕೆಲವು ಅಂಶಗಳನ್ನು ವಾಮನ ಬೇಂದ್ರೆಯವರು ಈ ರೀತಿ ಹೇಳಿದ್ದಾರೆ, ಸಂಸ್ಕೃತ ಬಾರದ ಕನ್ನಡ ರಸಿಕರಿಗೆ 'ಕನ್ನಡ ಮೇಘದೂತ' ಹೆಚ್ಚು ಸುಲಭ, ಸರಳ, ಇದಕ್ಕಿಂತ ಇನ್ನೊಂದು ಬೇರೆ ಇಲ್ಲ ಎಂದು ಅಭಿಪ್ರಾಯ ಪಡುತ್ತಾರೆ ('ಕನ್ನಡ ಮೇಘದೂತ' ಸಂ. ವಾಮನ ಬೇಂದ್ರೆ ಪುಟ – ೧೩).

ಶ್ರೀ ಪಂಡರಿನಾಥಚಾರ್ಯ ಗಲಗಲಿಯವರು 'ಮೇಘದೂತ ತುಲನಾತ್ಮಕ ಸಮೀಕ್ಷೆ' ಎಂಬ ಸಮಗ್ರ ಲೇಖನದಲ್ಲಿ 'ಬೇಂದ್ರೆಯವರ ಶಬ್ದಶಕ್ತಿ, ಭಾವಾನುವಾದ ಶಕ್ತಿ ಎರಡೂ ಒಗ್ಗೂಡಿ, ಕನ್ನಡವನ್ನು ಸಂಸ್ಕೃತ ಭಾಷೆಯ ತೂಕಕ್ಕೆ ಏರಿಸಿದೆ' ಎಂದು ಕನ್ನಡ ಮೇಘದೂತದ ಕಾವ್ಯವನ್ನು ಕುರಿತು ಮತ್ತು ಬೇಂದ್ರೆಯವರ ಭಾಷಾ ವಿಶಿಷ್ಟತೆಯನ್ನು ಕುರಿತು ಹೇಳಿದ್ದಾರೆ (ಕನ್ನಡ ಮೇಘದೂತ ಸಂ. ವಾಮನ ಬೇಂದ್ರೆ ಪುಟಾ ೧೫).

ಶ್ರೀ ಹೆಚ್.ಎಸ್.ವೆಂಕಟೇಶ ಮೂರ್ತಿಯವರು 'ಕನ್ನಡ ಮೇಘದೂತ'ವು ಬೇಂದ್ರೆಯವರ ಪುನರ್ ಸೃಷ್ಟಿ ಎಂದು ಕರೆದಿದ್ದಾರೆ. ಇವರ ಅಭಿಪ್ರಾಯಗಳನ್ನು ಕುರಿತು ವಾಮನ ಬೇಂದ್ರೆಯವರು ಈ ರೀತಿ ಹೇಳಿದ್ದಾರೆ -

1) 'ಕನ್ನಡ ಮೇಘದೂತ' ದ ದೇಸಿ ಗುಣವನ್ನು ಸಮಾನ ಶಬ್ಧಗಳ ಆಯ್ಕೆ ಪ್ರತಿ ಶಬ್ಧಗಳ ಸೃಷ್ಟಿಯ ಹೊಸತನವನ್ನು ವಿವರಿಸಿದ್ದಾರೆ.
2) ದೇಸಿಯ ಚೆಲುವು, ಆಡು ಮಾತಿನ ಕಾಕು, ಬೇಂದ್ರೆಯವರ ಅದ್ಭುತ ಭಾಷಾ ಶಕ್ತಿಯ ಗುರುತಾಗಿದೆ.
3) ಅನುವಾದವೆಂದರೆ, ಮೂಲದ ಸಂವೇದನೆಯನ್ನು ಕನ್ನಡದ ನೆಲೆಗೆ ತಂದುಕೊಳ್ಳುವುದು. ಸಂಸ್ಕೃತದಲ್ಲಿ ಅಂತ್ಯ ಪ್ರಾಸವಿಲ್ಲ. ಕನ್ನಡದಲ್ಲಿ ಅಂತ್ಯ ಪ್ರಾಸದ ಸೊಗಸೇ ಸೊಗಸು ! ಬೇಂದ್ರೆ ಆ ನಾದದ ಚೆಲುವನ್ನು ಕನ್ನಡದಲ್ಲಿ ಬಹಳ ಚೆನ್ನಾಗಿ ಸೂರೆ ಮಾಡಿದ್ದಾರೆ.
4) ಸಂಸ್ಕೃತದಲ್ಲಿ ಅಶ್ಲೀಲವಾಗಿ ತೋರುವುದೆಂದು ವಿಧ್ವಾಂಸರು ಆಕ್ಷೇಪಿಸಿರುವ ನುಡಿಯನ್ನು ಬೇಂದ್ರೆಯವರು ಭಾವಾನುವಾದ ಮಾಡುವಾಗ ಶ್ಲೀಲವಾಗುವಂತೆ ಕಾಪಾಡಿದ್ದಾರೆ ಎಂದು ಹೆಚ್.ಎಸ್.ವೆಂಕಟೇಶ್ ಮೂರ್ತಿಯವರ ವಿಶ್ಲೇಷಣಾತ್ಮಕ ವಿಚಾರಗಳನ್ನು ವಾಮನ ಬೇಂದ್ರೆಯವರು ಹೇಳಿದ್ದಾರೆ.

ಬೇಂದ್ರೆಯವರು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ಮೂಲಕ ಕನ್ನಡ ಭಾಷೆಗೆ ಒಂದು ಹೊಸ ಭಾಷಾ ವಿನ್ಯಾಸವನ್ನು ಸೃಷ್ಟಿಸಿದ್ದಾರೆ. ಜಿ.ಎಸ್.ಸಿದ್ದಲಿಂಗಯ್ಯನವರು ಅಭಿಪ್ರಾಯ ಪಡುವಂತೆ ಪ್ರಾಚೀನ ಕಾಲದಿಂದ ಹರಿದು ಬಂದ ಕನ್ನಡ ಭಾಷೆಗೆ ವಿಸ್ತಾರವನ್ನು, ಸಾರತ್ಯತೆಯನ್ನು ಹಾಗೂ ಚಲನಶೀಲತೆಯನ್ನು ತಂದುಕೊಟ್ಟವರು ವಚನಕಾರರು. ಅನಂತರ ರೂಪಕ ಚಕ್ರವರ್ತಿ ಎನಿಸಿಕೊಂಡಂತ ಕನ್ನಡದ ಹೆಸರಾಂತ ಕವಿ ಮಹಾಶಯ ಕುಮಾರವ್ಯಾಸರು ಕನ್ನಡ ಭಾಷೆಗೆ ಇನ್ನೂ ಹೆಚ್ಚು ಚಾಲನೆ ನೀಡಿದರು. ಇದಾದ ಮೇಲೆ ಕನ್ನಡ ಭಾಷೆಗೆ ಉತ್ತರ ಕನ್ನಡದ ದೇಶಿಯ ಸೊಗಡನ್ನು ಹಾಗೂ ಗೇಯ ರೂಪಗಳನ್ನು ತುಂಬಿಕೊಟ್ಟು ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದವರು, ಬೇಂದ್ರೆಯವರು ಎಂದು ಅಭಿಪ್ರಾಯಪಟ್ಟಿದ್ದಾರೆ.

ಬೇಂದ್ರೆಯವರು ತನ್ನ ಕಾಲದ ಭಾಷೆಯ ದ್ರವ್ಯಗಳನ್ನು ಸೇರಿಸಿ, ಹಸಿಯಾದ ಜೇಡಿಮಣ್ಣು 'ಕುಂಬಾರನ ಕೈಚಳಕದಲ್ಲಿ ಹೊಸ ರೂಪ ಪಡೆಯುವಂತೆ ಕಾವ್ಯಕ್ಕೆ ತಕ್ಕ ಆಕೃತಿಯನ್ನು ಕೊಡುತ್ತಾರೆ. ಅನೇಕ ಭಾಷೆಗಳ ಪರಿಚಯವಿದ್ದ ಕಾರಣ ಭಾಷೆಯನ್ನು

ಸುಲಲಿತವಾಗಿ ಬಳಸಿಕೊಳ್ಳುತ್ತಿದ್ದರು. ಅವರ ಕಾವ್ಯಗಳಲ್ಲಿ ಧ್ವನಿಮಾ, ಆಕೃತಿಮಾಗಳು ತಾವೇ ತಾವಾಗಿ ರೂಪ ತಳೆದು, ಜೀವ ಪಡೆದು ತಾವಾಗಿಯೇ ಕುಣಿಯುತ್ತಾ ಬರುವುದು' ಎಂದು ಡಾ॥ ಚನ್ನಣ್ಣ ವಾಲಿಕಾರರು ಹೇಳಿದ್ದಾರೆ (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ ೧೦೧).

'ತನ್ನ ಬರವಣಿಗೆಯನ್ನು ಕುರಿತು ನನ್ನ 'ಕನ್ನಡ ಮೇಘದೂತ' ಭಾಷಾಂತರ ಎಂದು ನಾನು ಹೇಳಿಕೊಳ್ಳಲಾರೆ, ಆ ಗುಣ ಇದಕ್ಕಿಲ್ಲ. ಆದರೆ ಮೇಘದೂತದ ಪ್ರತಿಪದ್ಯ ಓದಿ, ನನಗಾದ ಆನಂದವನ್ನು ನಾನು ಕಂಡ ಚೆಲುವನ್ನು ಈ ಕನ್ನಡ ಪದ್ಯಗಳಲ್ಲಿ ಕಟ್ಟಿದ್ದೇನೆ, ರಚಿಸಿದ್ದೇನೆ' (ದ.ರಾ.ಬೇಂದ್ರೆ ಮುನ್ನುಡಿ – ಕನ್ನಡ ಮೇಘದೂತ) ಎಂದು ತಾವೇ ಸ್ವತಃ ಹೇಳಿಕೊಂಡಿದ್ದಾರೆ.

'ಕನ್ನಡ ಮೇಘದೂತ' ಸೃಷ್ಟಿಯಾಗಲು ಅನೇಕ ಕವಿಗಳ, ವಿಮರ್ಶಕರ ಪ್ರಭಾವವು ಇದೆ. ಪಂಪ, ರನ್ನ, ಪೊನ್ನರು, ಕಾಳಿದಾಸನ 'ಮೇಘದೂತ'ವನ್ನು ಮೆಚ್ಚಿಕೊಂಡಿದ್ದರು. ಮುಂದೆ ಶಾಂತ ಕವಿ, ವರದಾಚಾರ್ಯ, ಶ್ರೀ ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿ ಮತ್ತು ರೈನಾಪುರರು, 'ಮೇಘದೂತ' ವನ್ನು ಅಭ್ಯಾಸ ಮಾಡಿದ್ದರು. ಇವೆಲ್ಲದರ ಪರಿಣಾಮ ಬೇಂದ್ರೆಯವರು ಕನ್ನಡ ಮೇಘದೂತವನ್ನು ಅನುವಾದ ಮಾಡಲು ನಿರ್ಧರಿಸಿದರು. ಕಾವ್ಯ ರಚನೆಯಲ್ಲಿ ಸ್ವಾತಂತ್ರ್ಯ ಅವರಿಗೆ ಅತ್ಯಂತ ಪ್ರಿಯವಾದದ್ದು ತನ್ನ ಮನಸ್ಸಿಗೆ ತೋಚಿದ ಭಾವನೆಗಳನ್ನು ತನ್ನದೇ ಆದ ಭಾಷೆಯಲ್ಲಿ ಬರೆಯುವುದೆಂದರೆ ಅವರಿಗೆ ಎಲ್ಲಿಲ್ಲದ ಆಸಕ್ತಿ. ಇಂತಹ ಸುಲಲಿತವಾದ ಅಭಿವ್ಯಕ್ತಿಯನ್ನು ತಮ್ಮ ಕವಿತೆಗಳಲ್ಲಿ ಬಳಸಿಕೊಂಡಿದ್ದಾರೆ. ಭಾವಾನುವಾದದ ಸರಳ ರೀತಿ ಮತ್ತು ಮೇಘದೂತದ ರಗಳೆಯ ಗೇಯತೆ ಗುಣಗಳಿಂದ ಮೇಘದೂತ ಜನಪ್ರಿಯತೆಯನ್ನು ಪಡೆದುಕೊಂಡಿತು. ಹಾಗೆಯೇ 'ಸಖೀಗೀತ'ದಲ್ಲೂ ಕವಿ ಉಪಮೆ, ರೂಪಕ ಮತ್ತು ಪ್ರತಿಮೆಗಳನ್ನು ಬಳಸಿಕೊಂಡು ಕಾವ್ಯದ ತೂಕವನ್ನು ಹೆಚ್ಚಿಸಿದ್ದಾರೆ. ತತ್ವವನ್ನು ಕಾವ್ಯವಾಗಿಸುವ ರೂಪಕ ಶಕ್ತಿಯು ಬೇಂದ್ರೆಯವರ ಪ್ರತಿಭೆಯ ಒಂದು ಲಕ್ಷಣವಾಗಿದೆ.

ಅರ್ಥವತ್ತಾದ ಧ್ವನಿಗಳು ಯಥೇಚ್ಛವಾದ ರೂಪಕಗಳ ಬಳಕೆಯಿಂದ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಒಂದು ಸಮೃದ್ಧವಾದ ಭಾಷೆಯನ್ನು ಸೃಷ್ಟಿ ಮಾಡಿವೆ. 'ತುಂಬಿ ಬಂದಿತ್ತು' ಎನ್ನುವ ಪದ್ಯದಲ್ಲಿ ದುಂಬಿಯನ್ನು ಕುರಿತು ಹೇಳಲಾಗಿದೆ. ಮನಸ್ಸಿನಲ್ಲಾಗುವ ತಲ್ಲಣಗಳು ಪ್ರಣಯವಾಗಿ ತುಂಬಿ ಬಂದಿತು ಎಂಬಲ್ಲಿ ಬೇಂದ್ರೆಯವರ ಭಾಷಿಕ ಪ್ರಜ್ಞೆ ಮೆರೆಯುತ್ತದೆ. ಜಾಗೃತವಾದ ಶಬ್ದ ಭಂಡಾರವನ್ನು ತಮ್ಮ ಕಾವ್ಯಗಳಲ್ಲಿ

ಬಳಸಿಕೊಂಡಿದ್ದಾರೆ. 'ತುಂಬಿ' ಪ್ರೀತಿಗೆ ಸಾಂಕೇತಿಕವಾದದ್ದು. ಕಾಲವು ತುಂಬಿ ಬಂದಿತ್ತು ಎಂಬ ಅರ್ಥವನ್ನೂ ನೀಡುತ್ತಿದೆ.

ಕಾಳಿದಾಸನ 'ಮೇಘದೂತ' ವನ್ನು ಬೇಂದ್ರೆಯವರಿಗೆ ಮೊದಲೇ ಶಾಂತಕವಿ, ವರದಾಚಾರ್ಯರು, ಕುಕ್ಕೆ ಸುಬ್ರಹ್ಮಣ್ಯ ಶಾಸ್ತ್ರಿಗಳು, ರೈನಾಪುರ ಕವಿಗಳು ಕನ್ನಡಕ್ಕೆ ಅನುವಾದಿಸಿದ್ದಾರೆ. ಆದರೆ, ಈ ಎಲ್ಲಾ ಅನುವಾದಗಳಿಗಿಂತ ಬೇಂದ್ರೆಯವರ ಅನುವಾದವು ಕನ್ನಡ ಸಾಹಿತ್ಯದಲ್ಲಿ ಬೇಂದ್ರೆಯವರಿಗೆ ಒಂದು ವಿಶೇಷ ಸ್ಥಾನವನ್ನು ಗಳಿಸಿಕೊಟ್ಟಿದೆ. ಸ್ವಂತ ಭಾವ, ಕಲ್ಪನೆಗಳಿಂದ 'ಮೇಘದೂತ' ಕಾವ್ಯವು ಬೇಂದ್ರೆಯವರ 'ಮೇಘದೂತ'ವಾಗಿ ಪರಿಣಮಿಸಿದೆ.

ಕಾಳಿದಾಸನಷ್ಟೇ ಪರಿಣಾಮಕಾರಿಯಾಗಿ ಬೇಂದ್ರೆಯವರು ಭಾಷೆಯನ್ನು ಉಪಯೋಗಿಸಿಕೊಂಡಿದ್ದಾರೆ.

ಮೂಲ : ಕಾಳಿದಾಸ – ತಸ್ಮಿನ್ನದ್ರೌಕತಿ ಚಿದಬಲಾವಿ ಪ್ರಯುಕ್ತಃ ಕಾಮೀ
ನೀತ್ವಾ ಮಾಸಾನ್ಕಹಕವಲಯ ಭ್ರಂಶರಿಕ್ತ ಪ್ರಕೋಷ್ಠಃ
ಆಷಾಢಸ್ಯ ಪ್ರಥಮ ದಿನವೇ ಮೇಘಮಾ ಶ್ಲಿಷ್ಟಸಾನುಮ್
ವಪ್ರಕ್ರೀಡಾ ಪರಿಣತಗಜ ಪ್ರೇಕ್ಷಣೀಯಂ ದದರ್ಶ

ಅನು : ಬೇಂದ್ರೆ – ಅಗಲಿ ಇದ್ದರೂ (ಇಬ್ಬರೂ) ಆಸೆಗೊಂಡಿರಲು ಗಿರಿಯಳಂತು ಇಂತು
ಕೆಲವೆ ತಿಂಗಳಲಿ ಚಿನ್ನದ ಕಡಗ ಮೊಳಕೈಗೆ ಸರಿದು ಬಂತು
ಕಾರಹುಣ್ಣಿಮೆಯ ಮಾರನೆಯ ದಿನವೆ ಮೋಡಕೋಡನಪ್ಪಿ
ಕಂಡಿತೊಡ್ಡಿನೊಡ ಡಿಳ್ಳಿಯಾಡುವಾ ಆನೆಬೆಡಗನೊಪ್ಪಿ

ಇಬ್ಬರ ಅಗಲಿಕೆಯನ್ನು ಸೃಷ್ಟಿಯ ಸೌಂದರ್ಯದೊಂದಿಗೆ ಹೋಲಿಸಲಾಗಿದೆ. ಇದರಿಂದ ಕಾವ್ಯಕ್ಕೆ ಒಂದು ಉತ್ತಮ ಭಾಷೆ ಏರ್ಪಟ್ಟಿದೆ. 'ಸಖೀಗೀತ' ದಲ್ಲೂ ಇಂತದ್ದೇ ವರ್ಣನೆಯನ್ನು ಕವಿ ಮಾಡಿದ್ದಾರೆ. ಕಾವ್ಯದಲ್ಲಿ ಗಮನೀಯವಾದ ವಿಷಯವೆಂದರೆ, ಬೇಂದ್ರೆಯವರ ಮೇಲೆ ಕಾಳಿದಾಸನ ಸಂಸ್ಕೃತ ಪ್ರೇರಣೆ ಎಲ್ಲಿಯೂ ಕಂಡು ಬರುವುದಿಲ್ಲ. 'ಅಲ್ಲದೇ ಸಂಸ್ಕೃತ ಕಾವ್ಯಗಳು ಅವರಿಗೆ ಮಾರ್ಗದರ್ಶನವಾಗಲಿಲ್ಲ. ಅವರು ಓದಿಕೊಂಡಿದ್ದ ಸಂಸ್ಕೃತದ ತಿಳುವಳಿಕೆಯಿಂದ ಕನ್ನಡ ಮೇಘದೂತ ಬರೆಯಲಾಯಿತು' ಎಂದು ಸುಮತೀಂದ್ರ ನಾಡಿಗ ಅವರು ಅಭಿಪ್ರಾಯಪಡುತ್ತಾರೆ. ಬೇಂದ್ರೆಯವರು ಈ ಪ್ರಣಯ ಕಾವ್ಯಗಳಲ್ಲಿ ತಂತ್ರಕ್ಕೆ

ಹೆಚ್ಚಿನ ಪ್ರಾಮುಖ್ಯ ಕೊಡದೆ ಶಬ್ದಕ್ಕೆ ನಾದಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದ್ದಾರೆ. 'ಸಖೀಗೀತ' ಖಂಡಕಾವ್ಯವಾಗಿದ್ದು, 'ಷಡ್ ಋತುಗಳ' ಚೌಕಟ್ಟಿನಲ್ಲಿ ರಚಿತವಾಗಿದೆ. ಸಖ-ಸಖಿಯರ ಆಖ್ಯಾನದಂತೆ ಪ್ರಕ್ರಿಯೆಗೊಂಡಿದೆ.

ಬಿ.ನಂ. ಚಂದ್ರಯ್ಯನವರು ಬೇಂದ್ರೆ ಪದ ಬಳಕೆಯ ಕುರಿತು 'ಬೇಂದ್ರೆಯವರಿಗೆ ಪದಗಳೆಂದರೆ ಬಾಗಿಲ ಹಾಗೆ, ಒಂದೊಂದು ಪದವನ್ನು ತೆರೆಯುವಾಗಲೂ ಒಂದೊಂದು ಬಾಗಿಲನ್ನು ತಟ್ಟುವಂತೆ ತೋರುತ್ತದೆಂದು' (ಬೇಂದ್ರೆ ಸಾಹಿತ್ಯ ಸಮಾಲೊಚನೆ ಪುಟ ೮೬) ಅಭಿಪ್ರಾಯಪಡುತ್ತಾರೆ. ಬೇಂದ್ರೆಯವರ ಕವಿತೆಗಳಲ್ಲಿ ಪ್ರತಿಯೊಂದು ಪದವು ಸೂಕ್ಷ್ಮವಾದ ಅರ್ಥವನ್ನು ಹುದುಗಿಸಿಟ್ಟಿರುತ್ತದೆ. ಸಾಧಾರಣ ಭಾಷೆಯಾಗಿ ಕಾಣುವ ಅವರ ಕಾವ್ಯಗಳು ಒಳಹೊಕ್ಕಿ ನೋಡಿದರೆ ಮಾತ್ರ ಅದರ ವಿಸ್ತಾರ ತಿಳಿಯಲು ಸಾಧ್ಯ. ಬೇಂದ್ರೆಯವರ ಕಾವ್ಯ ಶೈಲಿಯಲ್ಲಿ ವೈವಿಧ್ಯತೆ ಇದೆ. ಅವರ ಕಾವ್ಯ ಶೈಲಿಯನ್ನು ಕುರಿತು ದಿವಾಣಜಿಯವರು ಹೀಗೆ ಹೇಳಿದ್ದಾರೆ. 'ಅವರ ಸಾಮಾಜಿಕ ಕವಿತೆಗಳಲ್ಲಿ ಇದರ ವಿಜೃಂಭಣೆ, ದೀಪ್ತ ಶೈಲಿ ಅವರ ಪ್ರಣಯ ಗೀತೆಗಳಲ್ಲಿ ಇದೆ. ಸೂರ್ತಶೈಲಿ ಅವರ ಅಧ್ಯಾತ್ಮಿಕ ಗೀತೆಗಳಲ್ಲಿದೆ. ದೀಪ್ತ ಶೈಲಿಯಲ್ಲಿ ಕಲ್ಪನಾ ವಿಲಾಸದ ಸೊಗಸು ಎದ್ದು ಕಾಣುತ್ತ' ಎಂದು ಹೇಳಿದ್ದಾರೆ.

ಯು.ಆರ್.ಅನಂತಮೂರ್ತಿಯವರು ಭಾಷೆಯ ಬಗ್ಗೆ ಕುರಿತು ಮಾತನಾಡುತ್ತಾ 'ಬೇಂದ್ರೆ ಕಾವ್ಯದ ಭೂಮಿಕೆಯಾದ ಧಾರವಾಡದ ನೆಲ ಆಕಾಶವನ್ನು ನುಂಗಿದೆ, ಶೂದ್ರ, ಜಾನಪದವನ್ನೂ, ಆರ್ಷ ವೇದವನ್ನೂ, ಐರೋಪ್ಯ ತತ್ವ ಜ್ಞಾನವನ್ನು, ಕನ್ನಡ ಕಾವ್ಯದ ಹಿಂದನ್ನೂ, ಈ ಭೂ ಪ್ರದೇಶದ ಪಚನಾಗ್ನಿಯಾಗಿದ್ದ ಬೇಂದ್ರೆಯ ಸಂವೇದನೆ ಜೀರ್ಣಿಸಿಕೊಂಡಿದೆ' (ಬೇಂದ್ರೆ – ಕಾವ್ಯ ಪುಟ ೫೫) ಎಂದು ಬೇಂದ್ರೆಯವರ ಬಹುಮುಖ ಪ್ರತಿಭೆಯನ್ನು ಕುರಿತು ಹೇಳಿದ್ದಾರೆ. ಬೇಂದ್ರೆ ಜಗತ್ತಿನ ಪ್ರತಿಯೊಂದು ಅನುಭವದ ಸಾರವನ್ನು ತಮ್ಮ ಕಾವ್ಯದಲ್ಲಿ ಭಾಷೆಯ ಮೂಲಕ ಹಿಡಿದಿಟ್ಟಿರುವುದನ್ನು ವಿವರಿಸಿದ್ದಾರೆ. ಅವರಿಗೆ ಅನಿಸಿದ್ದನ್ನು ಹಾಗೆಯೇ ಮೂಡಿಸಿ ಬಿಡುವ ಶಬ್ದ ಶಕ್ತಿ ಅವರಲ್ಲಿ ಅಡಕವಾಗಿದೆ.

'ಭಾಷೆ ಶರೀರವಾದರೆ, ಶೈಲಿ ಆತ್ಮವಿದ್ದಂತೆ. ಅಂತೆಯೇ ಶೈಲಿ ಆತ್ಮನಂತೆ ಅಥವಾ ದೇವರಂತೆ ನಿಗೂಢವಾದುದು. ಅದನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ, ಇನ್ನೇನು ಅರ್ಥವಾಯಿತು ಎನ್ನುತ್ತಿರುವಾಗಲೇ ಅರ್ಥವಾಗದಂತೆ ವರ್ತಿಸಿ ಬಿಡುತ್ತದೆಂದು' ಡಾ॥ ಬಿ.ನಂ.ಚಂದ್ರಯ್ಯನವರು (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ ೭೮) ಭಾಷೆ ಮತ್ತು

ಶೈಲಿಯನ್ನು ಕುರಿತು ಸಮಾಲೋಚಿಸಿದ್ದಾರೆ. ಭಾಷೆಯು ಬಳಸಿಕೊಂಡಂತೆ ರೂಪ ಪಡೆಯುವುದು. ಬೇಂದ್ರೆಯವರು ಜನಪರವಾದ ಅತೀ ಸರಳವಾದ ಅರ್ಥಗರ್ಭಿತವಾದ ಭಾಷೆಯನ್ನು ಬಳಸಿಕೊಂಡಿದ್ದಾರೆ. ಅವರ ಒಂದೊಂದು ಪದವು ಮುತ್ತಿನ ಜೋಡಣೆಯಂತೆ ಮಧುರವಾದದ್ದು. ಭಾಷೆ ಪ್ರತಿಯೊಬ್ಬರ ಸ್ವಾತಂತ್ರ್ಯಾಭಿವ್ಯಕ್ತಿಯ ಮಾಧ್ಯಮವಾಗಿದೆ. ಬೇಂದ್ರೆಯವರ ಕಾವ್ಯಗಳು ಸ್ವಾತಂತ್ರ್ಯ ಅಭಿವ್ಯಕ್ತಿಯ ಅನುಭವದ ತಳಹದಿಯಿಂದ ಆಕೃತಿಗೊಂಡಿರುವುದು. ಭಾಷೆ ಸಾಮಾನ್ಯವಾಗಿ ಮೂಡಿಬರುವುದು ಆಯಾ ಸಮಾಜದ ಸಂಘಟನೆಗಳ ಹಿನ್ನೆಲೆಯಲ್ಲಿ ಬೇಂದ್ರೆಯವರು ಬಾಲ್ಯದಿಂದಲೂ ಪಂಪ, ರನ್ನ, ಕಾಳಿದಾಸ, ಕುಮಾರವ್ಯಾಸರಂತಹ ಕಾವ್ಯಗಳನ್ನು ಓದಿಕೊಂಡಿದ್ದರು. ಆ ಕವಿಗಳ ಪ್ರೇರಣೆ ಬೇಂದ್ರೆಯವರ ಕಾವ್ಯದಲ್ಲಿ ಕಂಡರೂ ಅವರ ಭಾಷೆಯಲ್ಲಿ ಕಾಣುವುದಿಲ್ಲ. ಬೇಂದ್ರೆಯವರ ಭಾಷೆ ಇತರ ನವೋದಯ ಕವಿಗಳಿಗಿಂತ ಭಿನ್ನವಾದದ್ದು. ಶಿಷ್ಟ ಭಾಷೆಯನ್ನು ಪಂಡಿತ, ಪಾಮರರು ಹೆಚ್ಚು ಪ್ರಶಂಸೆ ಮಾಡುತ್ತಿದ್ದ ಸಂದರ್ಭಕ್ಕೆ ಬೇಂದ್ರೆಯವರು ಆಡು ಭಾಷೆಯಲ್ಲೇ ಬರೆದರು. ಬೇಂದ್ರೆಯವರು ತಮ್ಮನ್ನು ಸದಾ ಗುರುತಿಸಿಕೊಂಡಿದ್ದು, ಪ್ರೀತಿ, ಪ್ರಣಯ, ಒಲವು, ದೇವರುಗಳಾದ್ದರಿಂದ ಜನರಾಡುವ ಭಾಷೆಯೇ ಅವರ ಆಯ್ಕೆಯಾಯಿತು. ಬೇಂದ್ರೆಯವರ ಕಾವ್ಯಗಳಲ್ಲಿ ಪ್ರಾಸ ಆಂತರಿಕ ಅಗತ್ಯವಾಗಿದ್ದು, ಅದರ ಅಗತ್ಯತೆಯನ್ನು ಒಂದು ಹಾಡು! ಕವಿತೆಯಲ್ಲಿ ಹೇಳಿದ್ದಾರೆ. ಅವರು ಪ್ರಾಸಗಳನ್ನು ಬಳಸುವ ರೀತಿಯೇ ವಿಶೇಷವಾಗಿರುವುದು ಪ್ರಾಸದ ಅಗತ್ಯವೇ ಶಬ್ಧ ರೂಪಗಳನ್ನು ತೀರ್ಮಾನಿಸುತ್ತದೋ ಅಥವಾ ಶಬ್ಧರೂಪಗಳೇ ಪ್ರಾಸವನ್ನು ಸೃಷ್ಟಿ ಮಾಡುತ್ತದೋ ಎನ್ನುವ ಗೊಂದಲವನ್ನು ಸೃಷ್ಟಿ ಮಾಡುತ್ತದೆ. 'ಶಬ್ಧ ಶೃತಿಯಾದಾಗ ಮಾತು ಕೃತಿಯಾಯಿತು ಎಂದು ಬೇಂದ್ರೆ ಹೇಳಿದ್ದಾರೆ. ಶಬ್ಧಗಳ ಬೆನ್ನನ್ನೇ ಹತ್ತಿ ಒಂದು ಕಡೆ ಜೋಡಿಸಿ ಹೊಸ ರೂಪವನ್ನು ಕೊಡುವ ಶಾಬ್ದಿಕ ಕೌಶಲ್ಯ ಅವರಲ್ಲಿದೆ.

ಶಬ್ದ-ಪ್ರತಿಮೆ-ಪದ, ಶಬ್ದ-ರೂಪಕ-ಪದ ಈ ವಿನ್ಯಾಸದಲ್ಲಿ ಬೇಂದ್ರೆ ಕಾವ್ಯಗಳನ್ನು ಗಮನಿಸಬೇಕಾಗುವುದು. ಈ ಮೂರರ ಸಮ್ಮಿಳನದಿಂದ ಕಾವ್ಯ ಪರಿಪೂರ್ಣವಾಗಿದೆ.

ಗಾಳಿಗೆ ಗಾಳಿಯು ಬಯಲಿಗೆ ಬಯಲು ಎಂ
ದೆನ್ನುವ ಸುಡುಗಾಡಸಿದ್ದರೊಲು
ಗುಡಿಹೊಯ್ತು ಹುಡಿಗೊಡಿ; ಗಾಳಿಗೋಪುರಗಾಳಿ
ಗೊಂಡಿತು ಮಾಟದ ಆಟದೊಲು

ಸುಡುಗಾಡು ಸಿದ್ಧ, ಗಾಳಿಗೋಪುರ ಪದಗಳು ಅಪರಿಪೂರ್ಣವಾದ ಬದುಕನ್ನು ಕುರಿತು ಹೇಳುತ್ತಿದೆ. ಕವಿ ನೆನೆಸಿದೆಲ್ಲ ಕನಸಾಗಿ ಹೋಗುತ್ತಿರುವುದು ಕುರಿತು ಹೇಳಲಾಗಿದೆ.

ಕಾವ್ಯದ ಸೃಷ್ಟಿಯನ್ನು ಮತ್ತು ಅದರ ಶ್ರೇಷ್ಠತೆಯನ್ನು ಕುರಿತು ಸಮತೀಂದ್ರ ನಾಡಿಗರು ಈ ರೀತಿ ಹೇಳಿದ್ದಾರೆ. 'ಕಾವ್ಯ ಸೃಷ್ಟಿಗೆ ಆತ್ಮವೇ ಮೂಲ, ಬುದ್ಧಿಶಕ್ತಿ, ಕಲ್ಪನೆ ಅಥವಾ ಶ್ರವಣ ಶಕ್ತಿ ಕಾವ್ಯವನ್ನು ಸ್ವೀಕರಿಸುವುದೂ ಇಲ್ಲ, ಸೃಷ್ಟಿ ಮಾಡುವುದೂ ಇಲ್ಲ. ಅವು ಮಾಧ್ಯಮಗಳು ಮಾತ್ರ. ಆ ಮಾಧ್ಯಮಗಳು ತಮ್ಮ ಕೆಲಸವನ್ನು ಎಷ್ಟು ಶೀಘ್ರವಾಗಿ ನೆರವೇರಿಸಿ, ಶಬ್ದ ಎಷ್ಟು ನೇರವಾಗಿ ಆತ್ಮವನ್ನು ಮುಟ್ಟಿ, ಆತ್ಮದ ಆಳಕ್ಕೆ ಇಳಿಯುತ್ತದೋ ಅದರ ಮೇಲೆ ಕಾವ್ಯದ ಶ್ರೇಷ್ಠತೆ ಅವಲಂಬಿಸಿರುತ್ತದೆ. ಬೇಂದ್ರೆಯವರು ತಂತ್ರಕ್ಕಿಂತ ಲಯಬದ್ಧವಾದ ಶಬ್ದಕ್ಕೆ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಲಯಬದ್ಧ ಗತಿಯ ತೀವ್ರತೆ ಮತ್ತು ಶಾಬ್ದಿಕ ರೂಪ ಒಟ್ಟಾದಾಗ ಆತ್ಮ ಕಂಡ ಸತ್ಯದ ದರ್ಶನವು ತೀವ್ರವಾಗಿ ಪ್ರಕಟವಾಗುತ್ತದೆ (ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು ಪುಟ 59) ಸಮತೀಂದ್ರ ನಾಡಿಗರ ಈ ವಾಕ್ಯಗಳು ಬೇಂದ್ರೆಯವರ ಭಾಷಾ ಸ್ವರೂಪವನ್ನು ತೆರೆದು ತೋರಿಸುತ್ತದೆ.

ಶಂಕರ ಮೊಕಾಶಿ ಪುಣೇಕರರವರು ಬೇಂದ್ರೆಯವರ ಭಾಷಾ ವೈವಿದ್ಯವನ್ನು ಕುರಿತು 'ವಸ್ತುವಿನಷ್ಟೇ ಗಾಬರಿಗೊಳಿಸುವ ವೈವಿಧ್ಯ ಬೇಂದ್ರೆಯವರು ಬಳಸಿದ ಶೈಲಿ, ಭಾಷೆ ಛಂದಸ್ಸುಗಳಲ್ಲಿ ಸಿಗುತ್ತದೆ. ಇದನ್ನು ಎರಡು ಬಗೆಯಿಂದ ಅಭ್ಯಾಸ ಮಾಡಬಹುದು. ಭಾಷೆ ಛಂದಸ್ಸು ಬೇಂದ್ರೆಯವರಿಂದಲೇ ಹೊರಟಂತೆ, ಒಂದು. ಬೇಂದ್ರೆಯವರ ಭಾಷೆ ಜನಪದ ಸಾಹಿತ್ಯದ್ದು ಎಂದು ಕಣ್ಮುಚ್ಚಿ ಹೇಳಿ ಕೈ ಊರಿ ಕೂಡುವ ಬೀದಿ ವಿಮರ್ಶಕರು ಕಾವ್ಯಾಭ್ಯಾಸಕ್ಕೆ ಬಹಳ ಹಾನಿಯನ್ನು ಮಾಡಿದ್ದಾರೆ ಎಂದು ಬೇಂದ್ರೆಯ ಭಾಷಾ ಸೊಬಗನ್ನು ಹೇಳುತ್ತಲೇ ಇತರ ವಿಮರ್ಶಕರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ'. ಬೇಂದ್ರೆ ಭಾಷೆ ಕೇವಲ ಜನಪದ ಸಾಹಿತ್ಯದ್ದು ಎಂದು ಹೇಳಿರುವುದು ಅಷ್ಟು ಸಮಂಜಸವಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಬೇಂದ್ರೆಯವರಿಗೆ ಪ್ರತಿಭಾ ಪ್ರಜ್ಞೆ ಇರುವಂತೆ ಭಾಷಾ ಪ್ರಜ್ಞೆಯು ಸುದೀರ್ಘವಾಗಿದೆ ''ಭಾವ' ಶಬ್ದವನ್ನು ಕವಿ ವಿಶಿಷ್ಟವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ತಮ್ಮ 'ಭಾವಗೀತೆ' ಕವನದಲ್ಲಿ 'ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ' ಎಂಬ ಸಾಲಿನಲ್ಲಿ ಭಾವ ಶಬ್ದವನ್ನು ವಿಶಾಲವಾದ ಅರ್ಥದಲ್ಲಿ ಉಪಯೋಗಿಸುತ್ತಾರೆ. ಭಾವಗಳ ಮಹಾಪೂರವೇ ಬೇಂದ್ರೆ ಕಾವ್ಯದಲ್ಲಿ ಉದ್ಭವಿಸುವುದು. ಅವರ ಸಮರಸ ಸಿದ್ಧಾಂತ ಕವಿತೆಗಳಲ್ಲಿ ಭಾವ ಮತ್ತು ಅರ್ಥಗಳಿಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದ್ದಾರೆ. ಬೇಂದ್ರೆ ಎಂದರೆ ನೆನಪಾಗುವುದು ಅವರ ಭಾವಗೀತೆಗಳೇ.

ವಿ.ಕೃ.ಗೋಕಾಕ್‌ರು ಬೇಂದ್ರೆಯವರ ಶಬ್ಧ ಸೃಷ್ಟಿಯ ಚಮತ್ಕಾರಗಳನ್ನು ಕುರಿತು ಹೇಳುತ್ತಾ 'ಅವರ ಶಬ್ದಗಳಿಗೆ ಪ್ರತಿಮಾಮಯತೆಯಲ್ಲದೆ ಒಂದು ಬೌದ್ಧಿಕ ಉತ್ಕರ್ಷವಿದೆ. ಅದನ್ನು ತಿಳಿಯದೆ ಅವರ ಕೃತಿಗಳು ಪೂರ್ಣವಾಗಿ ತಿಳಿಯಲಾರವು' ಎಂದಿದ್ದಾರೆ. ಬೇಂದ್ರೆಯವರ ಕವಿತೆಗಳಲ್ಲಿ ಶಬ್ದಗಳು ಪೋಣಿಸಿಟ್ಟ ಮುತ್ತಿನ ಹಾರದಂತೆ ನಯವಾದ, ಸುಂದರವಾದ, ಕ್ರಮಬದ್ಧ ರಚನೆಯನ್ನು ಹೊಂದಿರುತ್ತದೆ.

ಜುಮ್ ಜುಮು ರುಮು ಜುಮು ಗುಂಗುಣು ದುಮುದುಮು ಎನ್ನುವಲ್ಲಿ ಶಬ್ಧಗಳ ಒಟ್ಟುಗೂಡುವಿಕೆ, ಶಬ್ದ, ರೂಪ, ಸ್ಪರ್ಶ ಎಲ್ಲವೂ ಅಡಗಿದೆ. ಬೇಂದ್ರೆಯ ಭಾಷೆ ಮತ್ತು ಶೈಲಿಯ ಬಗ್ಗೆ ಹೇಳುತ್ತಾ ಡಾ.ಬಿ.ನಂ.ಚಂದ್ರಯ್ಯನವರು 'ಮಡಿವಂತಿಕೆಯನ್ನು ಬಿಟ್ಟ ಬೇಂದ್ರೆಯವರಿಗೆ ಶಬ್ದದಾರಿದ್ರ್ಯವಿರಲಿಲ್ಲ. ಜನಪದಕ್ಕೆ ಮಾರುಹೋದ ಅವರ ಬರವಿಲ್ಲದ ಶಬ್ಧ ಸಂಪತ್ತು ಅನಂತತೆಯ ಕಲ್ಪನೆಯನ್ನು ನೀಡುವಲ್ಲಿ ಸಮರ್ಥವಾಗಿದೆ' ಎಂದು ಹೇಳಿದ್ದಾರೆ.

ಬೇಂದ್ರೆಯವರಿಗೆ ಕನ್ನಡ ಭಾಷೆಯ ಹಾಡುಗಳ ಪರಿಚಯವಿತ್ತು. ದಾಸರಪದಗಳಿಂದ ಜೋಗಿತಿಯರ ಹಾಡುಗಳವರೆಗೆ ಕೇಳಿ ತಿಳಿದುಕೊಂಡಿದ್ದರು. ಎಲ್ಲಾ ಬಗೆಯ ಹಾಡುಗಳನ್ನು ತಿಳಿದಿದ್ದ ಬೇಂದ್ರೆಯವರಿಗೆ ಭಾಷೆಯನ್ನು ತನ್ನ ಇಚ್ಛೆಗೆ ತಕ್ಕಂತೆ ಬಳಸಿಕೊಳ್ಳಲು ಕಷ್ಟವೆನಿಸಲಿಲ್ಲ. ಭಾಷೆಯ ಹಲವಾರು ರೀತಿಗಳನ್ನು ಜೀರ್ಣಿಸಿಕೊಂಡು ತಮ್ಮ ಕವಿತೆಗಳಲ್ಲಿ ಸ್ವತಂತ್ರ ಭಾಷಾ ಪ್ರಯೋಗವನ್ನು ಮಾಡಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ಭಾಷಾ ವಿಧಾನವನ್ನು ಪರಿಚಯಿಸಿದ್ದಾರೆ.

ಚಂದ್ರಶೇಖರ ಪಾಟೀಲರು ಬೇಂದ್ರೆಯವರ ಭಾಷಾ ಮಾರ್ಗವನ್ನು ಕುರಿತು ಈ ರೀತಿಯಾಗಿ ಹೇಳಿದ್ದಾರೆ. 'ಬೇಂದ್ರೆಯವರು ಸಾಹಿತ್ಯ ಸೃಷ್ಟಿ ಮಾಡುತ್ತಿದ್ದ ನವೋದಯದ ಸಂದರ್ಭ ನಮ್ಮ ದೇಶದ ರಾಷ್ಟ್ರೀಯ ಚಳುವಳಿಯ ಕಾಲವಾಗಿದ್ದಂತೆಯೇ ನಮ್ಮ ಕನ್ನಡ ನಾಡಿನ ಏಕೀಕರಣದ ಚಳುವಳಿಯ ಕಾಲವೂ ಆಗಿತ್ತು. ಆ ಸನ್ನಿವೇಶ, ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕಲಾಕೃತಿಗಳನ್ನು ನಿರ್ಮಿಸುವುದರ ಜೊತೆಗೇ ಕನ್ನಡ ಭಾಷೆಯನ್ನು ಕೂಡ ಹೊಸ ಅನುಭವದ ಅಗತ್ಯಗಳಿಗೆ ತಯಾರು ಮಾಡುವ ಸಾಂಸ್ಕೃತಿಕ ತುರ್ತನ್ನು ಸಾಹಿತಿಗಳ ಮೇಲೆ ಹೇರಿತ್ತು ಎಂದು ಅಭಿಪ್ರಾಯ ಪಡುತ್ತಾರೆ. ಈ ಸ್ಥಿತಿಯನ್ನು ಬಳಸಿಕೊಂಡ ಬೇಂದ್ರೆಯವರು ವೈವಿಧ್ಯಮಯ ಪ್ರಯೋಗಶೀಲತೆಯಲ್ಲಿ ತಮ್ಮನ್ನು ಬಳಸಿಕೊಂಡರು (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ : 143). ಜಿ.ಎಸ್. ಸಿದ್ದಲಿಂಗಯ್ಯನವರು ಬೇಂದ್ರೆಯವರ

ಭಾಷೆಯನ್ನು ಕುರಿತು ಮಾತನಾಡುತ್ತ ಯಾವ ಕವಿಯೇ ಆಗಲಿ, ನಮಗೆ ದಕ್ಕುವುದು ಭಾಷೆಯ ಮೂಲಕವೇ ಎಂದು ಹೇಳಿದ್ದಾರೆ'.

ಬೇಂದ್ರೆಯವರು ಕನ್ನಡ ಭಾಷೆಗೆ ಚೆಡಗು, ಸೊಗಸುಗಳನ್ನು ಸೇರಿಸಿದಂತೆ ಕನ್ನಡ ಛಂದೋಲಯಗಳಲ್ಲಿಯೂ ಹೊಸತನವನ್ನು ತಂದಿದ್ದಾರೆ. ಜಾನಪದ ಛಂದಸ್ಸುಗಳು, ಪಿರಿಯಕ್ಕರ ತ್ರಿಪದಿಗಳ ಜೊತೆಗೆ ಕನ್ನಡ ಹಾಗೂ ಮರಾಠಿ ಲಾವಣಿಗಳಿಂದ ಕನ್ನಡ ಭಾಷೆಗೆ ಹೊಸ ಹುರುಪನ್ನು ತುಂಬಿದ್ದಾರೆ. ಇತರ ಕವಿಗಳಲ್ಲಿ ಕಾಣದ ವಿಶಿಷ್ಟ ಗೇಯ ಶಕ್ತಿಯನ್ನು ಬೇಂದ್ರೆಯವರಲ್ಲಿ ಕಾಣಬಹುದು. ಒಟ್ಟಾರೆಯಾಗಿ ಬೇಂದ್ರೆಯವರ ಭಾಷೆ ಬಗ್ಗೆ ಹೇಳುವುದಾದರೆ ಜನಪರ, ಜನಹಿತ, ಮಧುರ, ಹೊಸ ಪ್ರಯೋಗ, ಹೊಸವಿಧಾನ, ಹೊಸಸೃಷ್ಟಿ ಎಲ್ಲದರ ಸಮ್ಮಿಲನವಾಗಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದೆ.

# ಅಧ್ಯಾಯ – ಮೂರು

## ‘ಸಖೀಗೀತ’ ಮತ್ತು ‘ಮೇಘದೂತ’ : ವಸ್ತು ಮತ್ತು ಆಶಯ

‘ಸಖೀಗೀತ’ ಮತ್ತು ‘ಮೇಘದೂತ’ ಕಾವ್ಯಗಳ ವಸ್ತು ‘ವಿರಹ’ ಅಥವಾ ಪ್ರಣಯವಾಗಿದೆ. ಒಂದು ರೀತಿಯಲ್ಲಿ ಇವೆರಡನ್ನೂ ಮೀರಿ ‘ಪ್ರೀತಿ’ ಎನ್ನುವ ಸೊಗಸಾದ ಪದವನ್ನು ಬಳಸಿದರೂ ತಪ್ಪಾಗಲಾರದು. ಆದಿಕಾಲದಿಂದಲೂ ಇಂದಿನ ಕಾಲದವರೆಗೂ ‘ಪ್ರೀತಿ’ ಎನ್ನುವ ಪದಕ್ಕೆ ಒಂದು ವಿಶೇಷವಾದ ಅರ್ಥವಿದೆ. ಅದನ್ನು ವಿಶಾಲಾರ್ಥದಲ್ಲಿಯಾದರೂ ಅರ್ಥೈಸಬಹುದು ಅಥವಾ ಸಂಕುಚಿತವಾದ ಅರ್ಥದಲ್ಲಾದರೂ ಅರ್ಥೈಸಬಹುದು ಸಂದರ್ಭಕ್ಕನುಗುಣವಾಗಿ ಅದು ಸೀಮಿತವಾದ ಅರ್ಥ ಸಂಬಂಧವನ್ನು ಕಲ್ಪಿಸುವುದು. ಸಖೀಗೀತ ಮತ್ತು ಮೇಘದೂತದಲ್ಲಿನ ವಸ್ತುವು ಇಂತಹ ವಿಶೇಷವಾದ ಮನ್ನಣೆ ಪಡೆದಿರುವ ಪ್ರೀತಿಯೇ ಆಗಿದೆ. ‘ವಿರಹ’ ವು ಮನುಷ್ಯನ ನಂಬಿಕೆಯಂತೆ ಸರ್ವವ್ಯಾಪಿಯಾದದ್ದು. ಅಂದಿನ ರಾಮ–ಸೀತೆಯರ ನಡುವೆ ಇದ್ದ ವಿರಹ, ದುಶ್ಯಂತನ–ಶಾಕುಂತೆಲಯರ ವಿರಹ, ನಳ–ದಮಯಂತಿಯರ ‘ವಿರಹ’ ಈಗಿನ ಪತಿ–ಪತ್ನಿಯರ ‘ವಿರಹ’ ಒಂದೇ ವ್ಯಾಪ್ತಿಯಲ್ಲಿ ಬಂದು ಕಾಣಿಸಿಕೊಳ್ಳುವುದು.

ಬೇಂದ್ರೆಯವರ ಕಾವ್ಯದ ವಸ್ತು ಹಲವು ಪ್ರಕಾರಗಳಲ್ಲಿ ಬಿತ್ತರಗೊಂಡಿದೆ. ಹಾಸ್ಯದ ನೋವು, ಸ್ವಾತಂತ್ರ್ಯದ ಕನಸು, ಬಡತನದ, ದುರ್ದೈವದ, ಹಸಿವೆಯ, ಅಜ್ಞಾನದ ಶತಮಾನಗಳ ಕೊರಗು, ಕ್ರಾಂತಿಯ ಮುನ್ನೋಟದ ರುದ್ರತಾಂಡವ, ಆತ್ಮಚಿಂತನ, ಮಾನವಧರ್ಮದ ಪುನರುತ್ಥಾನ ಹೀಗೆ ಬೃಹದಾಕಾರವಾದ ಕಾವ್ಯ ಭಂಡಾರವೇ ತಮ್ಮ ಕೈ ಸೆರೆ ಮಾಡಿಕೊಂಡಿದ್ದಾರೆ. ಆದರೆ ಎಲ್ಲಾ ಪ್ರಕಾರದ ಕಾವ್ಯಗಳಲ್ಲಿಯೂ ಪ್ರೀತಿ, ಒಲವು, ದಾಂಪತ್ಯ, ವಿರಹ, ಪ್ರಣಯ ವಸ್ತುವಿಗೆ ಬೇಂದ್ರೆಯವರಲ್ಲಿ ವಿಶೇಷವಾದ ಮಾನ್ಯತೆ ಇದೆ. ಬದುಕಿನ ಭಾಗವಾದ ಇವುಗಳನ್ನು ತಮ್ಮ ಕಾವ್ಯದಲ್ಲಿ ಕವಿ ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಜೀವನದಷ್ಟೇ ಪ್ರಾಮುಖ್ಯತೆಯನ್ನು ಕಾವ್ಯಕ್ಕೂ ಸಹ ಕೊಟ್ಟಿದ್ದಾರೆ. ತಮ್ಮ ಕಾವ್ಯದಲ್ಲಿನ ಒಂದು ಸಣ್ಣ ಧ್ವನಿಯಲ್ಲೂ ಜೀವಂತಿಕೆಯನ್ನು ಕಾಣುವಂತ ಸ್ವಭಾವವೇ ಇವತ್ತಿಗೂ ಅವರ ಕಾವ್ಯಗಳು ಶಾಶ್ವತವಾಗಿ ನೆಲಸಲು ಸಾಧ್ಯವಾಗಿದೆ.

ಬೇಂದ್ರೆಯವರ ಕಾವ್ಯಕ್ಕೂ ಮತ್ತು ಅವರ ಬದುಕಿಗೂ ಯಾವ ವ್ಯತ್ಯಾಸವೂ ಇಲ್ಲ. ತಮ್ಮ ಪ್ರತಿನಿತ್ಯದ ಚಟುವಟಿಕೆಗಳನ್ನೇ ಅವರು ಕಾವ್ಯದ ವಸ್ತುವಾಗಿ ಬಳಸಿಕೊಂಡರು. ತಮ್ಮ ಕಾವ್ಯಗಳಲ್ಲಿ ತಾವೇ ವಿಹರಿಸುತ್ತಾ ಕಾವ್ಯ ಕಟ್ಟಿರುವ ರೀತಿಯನ್ನು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ಕಾಣಬಹುದು. ಅವರು ಬಳಸಿಕೊಂಡಿರುವ ಕಾವ್ಯದ ವಸ್ತು ಸಾಮಾಜಿಕವಾಗಿ ಅನೇಕ ಆಯಾಮಗಳಲ್ಲಿ ಬಿತ್ತರಗೊಳ್ಳುತ್ತದೆ. ಯಶೋಧರ ಚರಿತೆಯಲ್ಲಿ ಜನ್ನ ಬಳಸಿಕೊಂಡಿರುವ ಪ್ರಣಯ ಅಥವಾ ಕಾಮ ಬೇಂದ್ರೆಯ ಪ್ರಣಯಕ್ಕಿಂತ ವಿಭಿನ್ನವಾದುದು. ಸಮಾಜದ ದೃಷ್ಟಿಯಲ್ಲಿ ಅದು ಒಂದು ತಿರಸ್ಕೃತವಾದ ಪ್ರಣಯ ಎಂದೇ ಹೇಳಬಹುದು. ಯೋಶೋದರ ಚರಿತೆಯಲ್ಲಿ ಅಮೃತಮತಿಗೆ ಬದಗನಲ್ಲಿ 'ಪ್ರೀತಿ' ಉಂಟಾಗಿ ಅವನನ್ನು ನೋಡುವ, ಕೂಡುವ, ಮಾತನಾಡುವ ಬಯಕೆ ಅವಳಲ್ಲಿ ಉಂಟಾಗುವುದು. ವಿರಹ ವೇದನೆಯಿಂದ ಬದಗನನ್ನು ನೋಡುವ ನಿರೀಕ್ಷೆಯಲ್ಲಿರುವಳು. ಇಲ್ಲಿ ಯಶೋದರನ ಪತ್ನಿಯಾಗಿದ್ದ ಅಮೃತಮತಿಯಲ್ಲಿ ಬೇರೆಯ ಪುರುಷನೊಂದಿಗೆ 'ಪ್ರೀತಿ' ಉಂಟಾಗುವುದು ಸಹಜವಾಗಿ ಒಪ್ಪಲಾರದ ವಿಷಯ. ಆದರೆ ಬೇಂದ್ರೆಯವರ 'ಸಖೀಗೀತ'ದ ಸಖ-ಸಖಿಯರ ಪ್ರಣಯ ಹಾಗೂ 'ಮೇಘದೂತ'ದಲ್ಲಿನ ಯಕ್ಷ-ಯಕ್ಷಿಯರ ಪ್ರಣಯ ಆದರ್ಶವಾದುದು ಮತ್ತು ಆರೋಗ್ಯಕರವಾದದ್ದು, ಸಮಾಜದ ಚೌಕಟ್ಟನಲ್ಲಿ ಮಾನ್ಯತೆ ಪಡೆದಿರುವಂತದ್ದು. ಸಖೀಗೀತದ ಹಾಡು ಪ್ರಾರಂಭವಾಗುವುದು ಕಾವ್ಯದ ನಾಯಕನು ತನ್ನ ಸಖೀಗಾಗಿ ಜೀವನ-ಪೂರ್ವಭಾವದ ಸ್ಮೃತಿಗಳನ್ನು ಹಾಡಲುದ್ಯುಕ್ತನಾಗಿದ್ದಾನೆ. ಮದುವೆಯ ದಿನದ ಸಂಜೆಯ ಸ್ಮೃತಿಯಿಂದ ಗೀತವು ಪ್ರಾರಂಭವಾಗುವುದು. ಪ್ರಾರಂಭದ ಹುಮ್ಮಸು, ಹೊಸದರ ಹೊಸತನದೊಂದಿಗೆ ವಿವಾಹಿತ ಪ್ರಣಯದ ಪ್ರಸ್ತಾವನೆಯನ್ನು ಹಾಕುವುದು. ಅಕಲ್ಪಿತವಾದ ಚೊಚ್ಚಲ ಸಂಭ್ರಮ, ಅದು ಕಳೆದುಕೊಂಡ ಕಾವ್ಯ ನಾಯಕನ ತಾಯಿಗೆ ಆದ ಸಂಕಟ, ಸೊಸೆಯ ಮುರುಚಲವನ್ನು ಮಗುವಾಗಿ ಕಾಣುವ ಪೂರ್ವದಲ್ಲಿಯೇ ಆ ತಾಯಿಯ ಸಾವು, ಅದರಿಂದ ದಂಪತಿಗಳು ಎಲ್ಲೆಲ್ಲೊ ಇದ್ದು ವಿರಹ ಸಂಚಾರದ ಸೂಚನೆಯಾಗುವುದು. ಇದು ಒಂದು ರೀತಿಯಲ್ಲಿ ಅವರಿಗೆ ಶಾಪವಾಗಿಯೇ ಕಾಡುವುದು. ಹೊಸ ಮಗುವಿನ ಆಗಮನ ನಂತರ ಚೊಚ್ಚಲ ಮಗುವಿನ ಸಾವು, ಜೀವನ ಬೇಸರವಾಗಿ ರಮ್ಯತೆ ಮಸಕಾಗುವುದು. ಇದೇ ಕಾಲಕ್ಕೆ ಗಾಂಧೀ ಚಳುವಳಿಯಲ್ಲಿ ಹೋಗಿ, ಬಂದಿವಾಸ, ವನವಾಸಗಳಾಗಿ ದಂಪತಿಗಳಲ್ಲಿ ಮನೋವ್ಯಥೆಯ ಸತ್ವ ಪರೀಕ್ಷೆಯ ಕಾಲವೇ ಬಂದು ಹೋಗುವುದು. ಈ ಕಷ್ಟದಲ್ಲಿಯೇ ಸುಖದ ಮುಖ ತೋರುವುದು. ಆದರೆ ಅದು ಬಹಳ ಕಾಲ ಇರುವುದಿಲ್ಲ. ಮುಂದೆ ಹಾದಿ ಏನು ಎನ್ನುವ ಹೊತ್ತಿಗೆ ದೈವವು ಸಹಾಯವಾಗಿ ಬಂದಿತು. ಮುಂದಿನ ಹಾದಿಯಲ್ಲಿ ಸಖ್ಯವು ಫಲಿಸುವುದೆಂಬ ಆಶಯದಲ್ಲಿ "ಸಖೀಗೀತ" ದ ಪೂರ್ವಾನುರಾಗ ಸಮಾಪ್ತವಾಗುವುದು.

ಕನ್ನಡ ಮೇಘದೂತದಲ್ಲಿ ಎರಡು ಪ್ರೇಮಿ ಜೀವಗಳನ್ನು ಆಗಲಿಸಿ ನಿಲ್ಲಿಸಲಾಗಿದೆ. ಆಗಲಿದ ಕ್ಷಣದಲ್ಲಿ ಉಂಟಾಗುವ ವ್ಯಥೆಯೇ ಇಲ್ಲಿ ಕಾವ್ಯವಾಗಿದೆ. ಯಕ್ಷನು "ಪಟ್ಟ ಪಾಡೆಲ್ಲವು ಹುಟ್ಟು ಹಾಡಗುತ್ತಾ ಹೊಸವಾಗಿ ರಸವಾಗಿ ಹರಿಯುತ್ತದೆ" ಎಂದು ಡಾ. ಬಿ.ಬಿ. ರಾಜ ಪುರೋಹಿತರು ಹೇಳಿದ್ದಾರೆ (ಮೇಘದೂತ ಕವನ ಸಂಕಲನ ಪುಟ 90) ಸುತ್ತಲಿನ ಪ್ರಕೃತಿಯು ಅದಕ್ಕೆ ಸ್ಪಂದಿಸಿದ ಮೇಳಗೀತವಾಗಿದೆ.

ಮೇಘದೂತದ ಕಾಲವಿಸ್ತಾರ ಆಷಾಡದಿಂದ ಕಾರ್ತಿಕದವರೆಗೆ ಮೊದಲ ದಿನಗಳಲ್ಲಿ ಬಾನಿಗೆ ಒಡೆಯನಾದ ಮೋಡವು ಕರ್ಕವನ್ನು ಹೊಕ್ಕಿ ಇಳೆಗೆ ಭಾಗೀರಥಿಯನ್ನು ತರುತ್ತಾನೆ. ಎಲ್ಲೆಡೆಗೂ ಸಂಗಮದ ಸಂಭ್ರಮ ನಡೆದಾಗ ಸಖಿಯಾದ ಯಕ್ಷಿ ಕನಸಿನಂತೆ ಬಂದು ಕಾಡುತ್ತಾ ತನ್ನಾಕೆಗೆ ಕುಶಲವಾರ್ತೆಯನ್ನು ಕಳುಹಿಸಲು ಮೇಘವನ್ನೇ ಸಂದೇಶವಾಹಕನಾಗಿ ಕಳುಹಿಸುತ್ತಾನೆ. ಯಕ್ಷ ಕಳುಹಿದಂತೆ ಮೇಘವು ರಾಮಗಿರಿಯ ನೈಋತ್ಯದಿಂದ ಈಶಾನ್ಯಕ್ಕೆ ಹೊರಟು ವಿದಿಶ, ಉಜ್ಜಯಿನಿ, ಕುರುಕ್ಷೇತ್ರ ದಾರಿಯಿಂದ ಯಕ್ಷನಿಗಾಗಿ ಉತ್ತರದ ಅಲಕೆಗೆ ಹೋಗಬೇಕು. ಹೋಗುತ್ತಾ ದಾರಿಯಲ್ಲಿ ಸಂದಿಸುವ ಉಜ್ಜೈನಿಯ ಚೆಲುವೆಯರನ್ನು ನೋಡಲೇಬೇಕೆನ್ನುವ ಇಂಗಿತವನ್ನು ವ್ಯಕ್ತಪಡಿಸಲಾಗಿದೆ. ಹೀಗೆ ಸಾಗುವಾಗ ಮೇಘವು ಅಲಕಾವತಿಯವರೆಗೂ ಪ್ರಕೃತಿಯ ಸೌಂದರ್ಯವನ್ನು ಸವಿಯುತ್ತಾ ಸಾಗುವುದು. ಹಿಮಗಿರಿಕಂದರಗಳೆಲ್ಲವನ್ನು ದಾಟಿ ಅಲಕಾವತಿಯನ್ನು ಸೇರುವುದು. ಇದಿಷ್ಟು ಕಾವ್ಯದ ಹಂದರವಾಗಿದೆ.

ಬದುಕಿನ ಅನೇಕ ಆದರ್ಶಗಳಲ್ಲಿ ಪ್ರೇಮ, ಪ್ರಣಯವು ಒಂದು ಮುಖ್ಯವಾದ ಅಂಶವಾಗಿದೆ. ಪ್ರಿಯವಾದ ವಸ್ತುಗಳಿಂದ, ವ್ಯಕ್ತಿಗಳಿಂದ, ಘಟನೆಗಳಿಂದ ಸಿಗುವಂತ ಆನಂದ ಪ್ರೇಮದ ಫಲವೇ ಆಗಿದೆ. ಗಂಡು-ಹೆಣ್ಣು ಪರಸ್ಪರ ಮೆಚ್ಚಿ ಮನಸ್ಸುಗಳು ಒಂದಾದಾಗ ಪ್ರಿಯಕರ-ಪ್ರಿಯೆ ಆಗುವರು. ಇವರೇ ಪತಿ-ಪತ್ನಿಯೂ ಆಗುವುದರಿಂದ ಜೀವನದ ನೌಕೆ ಸುಗಮವಾಗಿ ಸಾಗುವುದು. ಇದು ಲೋಕ ರೂಢಿ ನಿಯಮವಾಗಿದೆ.

'ಮೇಘದೂತ'ದಲ್ಲಿ ಕಾಣಿಸಿಕೊಳ್ಳುವ ಸಖ-ಸಖಿಯರ ಪ್ರಣಯ ವಿವಾಹದ ನಂತರ ಆಗಲಿದ್ದ ಕ್ಷಣಗಳಲ್ಲಿ ಯಕ್ಷಿಯನ್ನು ಯಕ್ಷ ನೋಡುವ, ಸೇರುವ ಕಾತುರದಲ್ಲಿರುತ್ತಾನೆ. 'ಪ್ರೀತಿ'ಯ ಬಗ್ಗೆ ಬೇಂದ್ರೆಯವರು 'ಮೇಘದೂತ'ದ ಪೀಠಿಕಾ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದ್ದಾರೆ.

1) ಅನಾದಿಕಾಮದ ಕ್ರಮ

2) ಜೀವಲೋಕದಲ್ಲಿ ಕಾಮ

3) ಭೂಮಿಯ ಕಾಮ

4) ಯಕ್ಷ-ಯಕ್ಷಿ

5) ಯಕ್ಷನ ಮೇಘ

6) ಕವಿಯ ಮೇಘ

7) ಕಾಳಿದಾಸ

8) ಮಂದಾಕ್ರಾಂತ

9) ಬೇರೆ ದೂತ ಕಾವ್ಯ

10) ಭಾಷಾಂತರವಲ್ಲ, ಭಾವಗ್ರಹಣ

ಎಂಬ ಹತ್ತು ವಿಭಾಗಗಳನ್ನು ಮಾಡಿದ್ದಾರೆ. ಮೊದಲ ಮೂರು ಭಾಗಗಳಲ್ಲಿ ಪ್ರಣಯದ ಬಗ್ಗೆ ವಿವರವಾಗಿ ಹೇಳುತ್ತಾ, 'ಕಾಮ'-ವ್ಯಕ್ತಿಯೇ ಭಾವವೇ, ತತ್ವವೇ, ಪುರುಷಾರ್ಥವೇ ಎಂಬ ಚಿಂತನೆ ಮಾಡಿದ್ದಾರೆ. 'ಕಾಮ' ಎಂಬುದು ಒಂದು ಭಾವ ಅಥವಾ ತತ್ವ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ತತ್ವ ದೇವಲೋಕದಿಂದ ಜೀವಲೋಕದವರೆಗೂ ಹಬ್ಬಿದೆ ಎಂದು ಬೇಂದ್ರೆಯವರು ಅಭಿಪ್ರಾಯಪಟ್ಟಿದ್ದಾರೆ. 'ಕಾಮ' ಶಬ್ದದ ಅರ್ಥವನ್ನು ಬ್ರಹ್ಮ ಹೃದಯದಲ್ಲಿ ಜನಿಸಿದ ಇಚ್ಛೆ ಎಂದು ಹೇಳಿದ್ದಾರೆ. ಈ ಕಾಮವು ಬ್ರಹ್ಮ-ಮಾಯೆ ಶಿವ-ಶಕ್ತಿ, ವಿಷ್ಣು-ಲಕ್ಷ್ಮಿ ಇವರ ಜೀವನದಲ್ಲಿಯೂ ಪ್ರಮುಖ ಪಾತ್ರವನ್ನು ಆಡಿದೆ. ಬ್ರಹ್ಮನ ಹೃದಯವನ್ನು ಶಿವನ ತಪಸ್ಸನ್ನು ಗೆದ್ದದ್ದು ಕಾಮನೇ. ಶ್ರೀ ಕೃಷ್ಣ-ರುಕ್ಮಿಣಿಯರ ಮಗ-ಪ್ರದ್ಯುಮ್ನನಾಗುತ್ತಾನೆ. ಇದರ ಅರ್ಥ ಕಾಮವು, ಸೃಷ್ಟಿ, ಸ್ಥಿತಿ ಮತ್ತು ಲಯೆ ಎಂಬ ಮೂರೂ ಅವಸ್ಥೆಗಳನ್ನು ವ್ಯಾಪಿಸಿದೆ. ಕಾಮ ಪುರುಷನಾದರೆ, ರತಿ ಪ್ರಕೃತಿ. ಆದುದರಿಂದಲೇ ಇವರಿಬ್ಬರು ಪತಿ-ಪತ್ನಿ ಹಾಗೆಯೇ ಪ್ರೇಮ ಎಂಬುದು ಕಾಮದ ಒಂದು ಪ್ರಕಟ ರೂಪ. ಈ ಪ್ರೇಮ ಸುಪ್ರೇಮವಾಗಬೇಕಾದರೆ ಅದಕ್ಕೆ ವಿರಹ ಎಂಬ ಅಗ್ನಿ ಪ್ರವೇಶವು ಅನಿವಾರ್ಯ. ಅಗ್ನಿ ಪ್ರವೇಶದಿಂದ ದಹನವಾಗದೆ ಅದು ತತ್ವವಾಗಿ ಉಳಿಯುತ್ತದೆ. ಮಗುವಿನ ಜನನ ತಂದೆ ತಾಯಿ ಅಗಲುವಂತೆ ಮಾಡಿದರೂ ಮಗುವಿನ ಪ್ರೀತಿ ಅವರನ್ನು ಸ್ನೇಹದ ಬಂಧವಾಗಿ ಕೂಡಿಸುತ್ತದೆ. ಇದು ಕಾಮದ ಗೃಹಸ್ಥ ನೆಲೆಯಾದರೆ ಬ್ರಹ್ಮ ಅಂದರೆ ಮಾಯೆ-ಶಿವ-ಶಕ್ತಿ ಇವರನ್ನು ಅಗಲಿಸುವುದು, ಕೂಡಿಸುವುದು ಕಾಮದ ನೆಲೆಯಾಗಿದೆ. ಇದುವೆ ದೇವಕಾಮ.

ದೇವಲೋಕದ ಕಾಮವು ಜೀವಲೋಕದ ಕಾಮವಾಗುವಾಗ ಮೂರು ಪ್ರಕಾರಗಳಾಗುತ್ತವೆ ಎಂಬುದು ಕವಿಯ ಚಿಂತನೆಯಾಗಿದೆ. ಮಗು ಎಂಬುದು ಕಾಮದೇವ. ಕಾಮಿಗಳಾದ ತಂದೆ-ತಾಯಿಗಳು ಮಗನ ಬಗ್ಗೆ ಮೋಹ ಇರುತ್ತದೆ. ಊಹೆಯ ಸುಳಿಗೆ ಸಿಗುವುದೇ ಕವಿಯ ಕಾಮವಾಗಿರುತ್ತದೆ. ಯೋಗ ಅವಲಂಬಿಯಾಗಿರುವುದು ಭಕ್ತನ ಕಾಮ. ಇವು ಪ್ರೇಮದ ಮೂರು ಪ್ರಕಾರಗಳು.

ಭೂಮಿಯ ಕಾಮವನ್ನು ಕುರಿತು, ಮಣ್ಣು-ಹೆಣ್ಣು ಬಾನೊಡೆಯಿಂದ ಅಗಲಿಹಳನಂಗನಿಂದ ವಿರಹ ಬವಣೆಯಲಿ ತಿರುಗಿ ತಿರುಗುವಳು ಹೊತ್ತು ಸುತ್ತಿನಿಂದ ಕಣ್ಣು ನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ ಎಂದು ಭೂಲೋಕದ ಕಾಮವನ್ನು ವಿವರಿಸಿದ್ದಾರೆ. ಮಣ್ಣು-ಹೆಣ್ಣು-ಪೃಥ್ವಿ ಬಳಲಿ ದುಃಖ ಪಟ್ಟು ಸುರಿಸಿದ ಕಣ್ಣೀರೆ, ಉಗಿಯಾಗಿ, ಮೋಡವಾಗಿ ಬಾನೊಡೆಯನನ್ನು ಕೂಡುತ್ತಾಳಂತೆ. ಆ ಕೂಡುವಿಕೆಯ ಸಂತೃಪ್ತಿಯ ಪರಿಣಾಮವಾಗಿ ಸುರಿಸಿದ ಸುಖಶ್ರುಧಾರೆ (ಮಳೆ). ಈ ಮಳೆಯಿಂದ ಭೂಮಿಯು ಬೆಳೆಯನ್ನು ಕೊಡುವುದು, ಇದು ಒಂದು ಪ್ರದ್ಯುಮ್ನ ರೀತಿಯಾಗಿದೆ.

ಇದೇ ಪ್ರಕಾರ ಕವಿಯು ಊಹಾಲೋಕವನ್ನು ಸಂಚರಿಸಿ, ಸಂಚಾರಿ ಭಾವಗಳನ್ನು ಸ್ಥಾಯಿ ಭಾವಗಳಾಗಿ ಮಾಡಿಕೊಂಡು, ರಸವತ್ತಾದ ಕಾವ್ಯವನ್ನು ಸೃಷ್ಟಿಸಿ ಸಫಲತೆಯನ್ನು ಪಡೆಯುತ್ತಾನೆ. ಊಹಲೋಕ ಸಂಚಾರವೇ ವಿರಹ ವೇದನೆ. ಸ್ಥಾಯಿಭಾವದ ನೆಲೆಗೆ ಏರುವುದೇ ಮೇಘರೂಪ ಮತ್ತು ಸಫಲ.

ಯಕ್ಷನ ಜೀವನದಲ್ಲಿಯೂ ಇದೇ ಕ್ರಮ ನಡೆಯುವುದು. ಯಕ್ಷನು ಯಕ್ಷಿಯಿಂದ ಅಗಲಿ, ಮೈಯ್ಯ ಉರಿ ಮನಸ್ಸಿನ ಉರಿ ಇವುಗಳಿಂದ ಬಳಲಿ, ನಿಟ್ಟುಸಿರು ಬಿಟ್ಟು ಕಣ್ಣೀರು ಸುರಿಸುತ್ತಾನೆ. ತನ್ನನ್ನು ಯಕ್ಷಿಯಿಂದ ಅಗಲಿಸಿದ ವಿಧಿಗೆ ಬಯ್ಯುತ್ತಾನೆ. ಈ ಬಯ್ಯುವಿಕೆ, ವಿರಹಿಯ ಹೃದಯದ ಉದ್ಗಾರ-ಗುಡುಗಾಟವೇ ಮೋಡ ಎಂಬುದು ಇಲ್ಲಿಯ ಕಲ್ಪನೆ. 'ಲೈಂಗಿಕ ತತ್ವವನ್ನು ಎಷ್ಟೇ ಗುರುತಿಸಿ ಕೊಂಡರೂ, ಅದನ್ನು ಭೂಮಿಯ ಮೇಲಿನ ದೈವೀ ಜೀವನದಿಂದ ಹೊರಗಿಡಲು ಸಾಧ್ಯವಿಲ್ಲ. ಜೀವನದಲ್ಲಿ ಅದು ಇದ್ದುಕೊಂಡೆ ದೊಡ್ಡ ಪಾತ್ರ ವಹಿಸುತ್ತದೆ. ಅದರೊಡನೆ ಸರಿಯಾಗಿ ವ್ಯವಹರಿಸಬೇಕು. ನಿರ್ಲಕ್ಷ್ಯ ಮಾಡಬಾರದು' ಎಂದು ಜಿ. ಕೃಷ್ಣಪ್ಪನವರು ಅಭಿಪ್ರಾಯ ಪಡುತ್ತಾ ಲೈಂಗಿಕತೆಯು ಸುಸಂಸ್ಕೃತವಾಗುವ ಪರಿಯನ್ನು ಹೇಳಿದ್ದಾರೆ. 'ಸಖೀಗೀತ' ಮತ್ತು 'ಮೇಘದೂತ'ದಲ್ಲಿ 'ಕಾಮ' ಎಂಬುದು

ಒಂದು ಸುಸಂಸ್ಕೃತ ಮಟ್ಟದಲ್ಲಿ ತಂದಿಳಿಸಿದ್ದಾರೆ. ಕಾಮದ ಬಗ್ಗೆ ಇರುವ ಕ್ಷುದ್ರ, ಹಗುರ, ಕೀಳುಮಟ್ಟದ ಅಭಿಪ್ರಾಯಗಳನ್ನು ಒಂದೊಂದಾಗಿ ಏರಿ ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಈ ಸಾಕ್ಷಾತ್ಕಾರಕ್ಕಾಗಿ ಹಾತೊರೆಯುವ ಯಕ್ಷ-ಯಕ್ಷಿಯ ಮತ್ತು 'ಸಖೀಗೀತ' ದಲ್ಲಿನ ಸಖ-ಸಖಿಯರು ಈ ನಿಟ್ಟಿನಲ್ಲಿ ಪವಿತ್ರ ಪ್ರೇಮದ ಸಂಕೇತವಾಗುತ್ತಾರೆ.

ಭೂಲೋಕದ 'ಕಾಮ' ದೈವೀಕಾಮ' ಎರಡನ್ನೂ ಸುಸಂಸ್ಕೃತ ಕಾಮವಾಗಿ ಮಾಡಿದ್ದಾರೆ. ಗಂಧರ್ವರಿಗೂ ಪ್ರಣಯ, ಪ್ರೀತಿ, ವಿರಹ, ಕಾಮ ಏನೆಲ್ಲಾ ರೂಪಗಳಿವೆ. ಅವೆಲ್ಲವೂ ನಿರ್ದಿಷ್ಟ ಚೌಕಟ್ಟಿನಲ್ಲಿ ಮೂಡಿವೆ. ಅದನ್ನು ಭೂಲೋಕದ 'ಕಾಮ' ಅಥವಾ 'ಪ್ರೀತಿ'ಯೊಂದಿಗೆ ಸಮೀಕರಿಸಿದ್ದಾರೆ. ಯಕ್ಷ-ಯಕ್ಷಿಯರ ಪ್ರೀತಿ ಉಂಟಾಗಿರುವುದು ಮದುವೆಯ ನಂತರವೇ ಆಗಿದ್ದು ಸಾಮಾನ್ಯ ಮನುಷ್ಯರಲ್ಲಿ ಉಂಟಾಗುವ ಸಹಜ ವೇದನೆ, ನೋವು, ವಿರಹ ಇದೆಲ್ಲದರ ಪರಿಣಾಮ ಪ್ರೀತಿಯ ಚಿಗುರುವಿಕೆ ಇವೆಲ್ಲವನ್ನೂ ಬೇಂದ್ರೆಯವರು ಗಂಧರ್ವರಲ್ಲಿಯೂ ತಂದಿದ್ದಾರೆ. ಸಮಾಜದ ಚೌಕಟ್ಟಿನಲ್ಲಿಯೇ ಅರಳುವ ಸಖ-ಸಖಿಯರ ಒಲವು ದೇವಕಾಮನನ್ನು ಕಾಮದೇವ (ಮಗು) ವಾಗಿ ಪಡೆದಿದ್ದಾರೆ, ತಮ್ಮ ವ್ಯಯಕ್ತಿಕ ಮಿತಿಯನ್ನು ಮೀರಿ ಜಗದ ಆನಂದಕ್ಕೆ ಜೊತೆಯಾಗಿ ಸಾಗಿದ್ದಾರೆ. 'ಬೆಂದವರ ಜೀವ ಬೆರಸೋಣ ಬಾ' ಎಂದು ಲೋಕ ಕಲ್ಯಾಣದ ಸರ್ವಕಾಲಿಕ ಚಿಂತನೆಯನ್ನು ಕವಿ ತಮ್ಮ ಕಾವ್ಯಗಳಲ್ಲಿ ಹೇಳಿದ್ದಾರೆ.

ಭಾರತೀಯ ಸಂಸ್ಕೃತಿಯ ಆರಾಧಕರಾದ ಬೇಂದ್ರೆಯವರು ಈ ಎರಡೂ ಕಾವ್ಯಗಳಲ್ಲಿ ಭಾರತೀಯ ಸಂಸ್ಕೃತಿಯ ಆದರ್ಶಗಳನ್ನು ಪಡಿಮೂಡಿಸಿದ್ದಾರೆ. ಪಾಶ್ಚಾತ್ಯ ಸಂಸ್ಕೃತಿಗೂ ನಮ್ಮ ಭಾರತೀಯ ಸಂಸ್ಕೃತಿಗೂ ಇರುವಂತ ವ್ಯತ್ಯಾಸಗಳನ್ನು ಈ ಕಾವ್ಯಗಳಿಂದಲೇ ಸಾಕಷ್ಟು ತಿಳಿಯಬಹುದು. ಭಾರತದಲ್ಲಿ 'ಪ್ರೀತಿ' ಎನ್ನುವ ಪದಕ್ಕೆ ಒಂದು ವಿಶೇಷವಾದ 'ಸ್ಥಾನ'ವಿದೆ ಕೆಲವೊಂದು ನಿಯಮ ನಿಬಂಧನೆಗಳಿವೆ. ಈ ನಿಟ್ಟಿನಲ್ಲಿ ಇವರ ಈ ಎರಡೂ ಕಾವ್ಯಗಳೂ ಭಾರತೀಯ ಸಂಸ್ಕೃತಿಯ ಪ್ರತೀಕವಾಗಿದೆ.

ಹಲವಾರು ಮುಖಗಳನ್ನೊಳಗೊಂಡ ಪ್ರೀತಿಯು ವಿವಿಧ ಸಂಬಂಧಗಳೊಂದಿಗೆ ಅದು ಹೆಣೆದುಕೊಂಡಿದೆ. ಗಂಡ-ಹೆಂಡತಿಯ ಸಂಬಂಧ ಶಾಶ್ವತ ಬಂಧವಾಗಲು ಅವರ ನಡುವೆ ಉದಯವಾಗುವ ಅನುರಾಗ, ಅನುಬಂಧ, ಸಹಬಾಳ್ವೆ, ಸ್ನೇಹ, ಪ್ರೀತಿ, ವಿರಹ, ಎಲ್ಲವೂ ಕಾರಣವಾಗುವುದು. ಬೇಂದ್ರೆಯವರ ಪ್ರೇಮಗೀತೆಗಳಲ್ಲಿ ಪ್ರೇಯಸಿ ಮತ್ತು ಪ್ರಿಯತಮನ ತತ್ವ ಮೌಲ್ಯವನ್ನು ತಿಳಿಸಿಕೊಡುತ್ತದೆ. ಪ್ರೇಮದಲ್ಲಿ ಆಕಾಂಕ್ಷೆ ಅವರ ಮೊದಲ ಹೆಜ್ಜೆ ಆಸೆ ಅಥವಾ

ಬಯಕೆ ಆದರ ಬೆಳವಣಿಗೆ ಬಯಸಿದ್ದು ಸಿಗದಿದ್ದಾಗ ಅಗಲಿಕೆ, ವಿರಹ ಉಂಟಾಗುತ್ತದೆ. ಇವರ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ಬಲಾತ್ಕಾರದ ಶೋಷಣೆಯ ವಿಷಯ ಬರುವುದಿಲ್ಲ. ಪ್ರೇಮ ಮತ್ತು ಒಲವಿನ ಸಂದೇಶವನ್ನು ಒಳಗೊಂಡಿದೆ. ಸ್ವಾರ್ಥವಿಲ್ಲದ ಪ್ರೀತಿ ಉಂಟಾದಾಗ ಪ್ರೇಮಾರಾಧಕರಾಗುವರು. ಇಂತಹ ಪ್ರೇಮದಲ್ಲಿರುವ ಕಾಮ ಶುದ್ಧತೆಯಿಂದ ಕೂಡಿರುತ್ತದೆ.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ವಸ್ತು ಪ್ರೀತಿಯಾಗಿರುವುದರಿಂದ ಇವು ಸರ್ವಕಾಲಕ್ಕೂ ಭಾವವನ್ನು ಹರಡುವಂತ ಗುಣ ಹೊಂದಿದೆ. ದಾಂಪತ್ಯ ಜೀವನದ ಸಾರ್ಥಕತೆಯನ್ನು ಪಡೆಯಬೇಕಾದರೆ ಪತಿ-ಪತ್ನಿಯರ ಮನಸ್ಸು ಮೊದಲು ಶುದ್ಧವಾಗಬೇಕು. ಒಬ್ಬರನ್ನೊಬ್ಬರು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಆಗ ಮಾತ್ರ ನಿಜವಾದ ಸ್ನೇಹ, ಪ್ರೀತಿ ಉಂಟಾಗಲು ಸಾಧ್ಯ. ಎನ್ನುವ ಹೊಸ ಅರಿವಿನಿಂದ 'ಸಖೀಗೀತ'ವನ್ನು ರಚಿಸಿದ್ದಾರೆ. ದಾಂಪತ್ಯದ ಜೀವನದಲ್ಲಿ ಭಿನ್ನಾಭಿಪ್ರಾಯಗಳು ಬಂದಾಗ ಉಂಟಾಗುವ ವಿರಸದ ಪ್ರಸಂಗ, ಅಸಮಾನತೆಯ ಭಾವ ಎಲ್ಲವನ್ನೂ 'ಸಖೀಗೀತ'ದಲ್ಲಿ ಬೇಂದ್ರೆಯವರು ಮರೆಮಾಚದೆ ವ್ಯಕ್ತಪಡಿಸಿದ್ದಾರೆ. 'ಸಖೀಗೀತ' ಕುಣಿತದ ಹಾಡಿದು, ಕುಣಿಯ ಹಚ್ಚಿತು ಜನಕೆ, ಕಲ್ಲಾದ ಮನಗಳ ಕರಗಿಸಿತು ಎಂಬಲ್ಲಿ ಪ್ರೀತಿಯ ವಿಶಾಲಾರ್ಥವನ್ನು ತಿಳಿಯದವರಿಗೆ ಬದುಕಿನ ಅವಲೋಕನವಾಗಿದೆ. ಪತಿ-ಪತ್ನಿಯರ 'ಪ್ರೀತಿ' ನಿರಂತರವಾದುದು ಅದಕ್ಕೆ ಅಂತ್ಯವಿಲ್ಲವೆಂಬುದನ್ನು

"ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೆ!"

ಎಂಬ ಧ್ವನಿಯು ವಿಕಾಸಶೀಲತೆಯನ್ನು ವ್ಯಕ್ತಪಡಿಸುತ್ತದೆ. ಸಖ-ಸಖಿಯರ ಒಂದು ಗೂಡಿದ ಆತ್ಮ ಕಾವ್ಯದ ಆತ್ಮವಾಗಿ 'ಸಖೀಗೀತ'ವಾಗಿದೆ.

ಬೇಂದ್ರೆಯವರ ದಾಂಪತ್ಯ ಗೀತೆಗಳು ಯೌವನದಲ್ಲಿ ಕಾಲಿರಿಸಿದ ಚಿಗುರೊಡೆದ ಭಾವನೆಯಾಗಿದೆ. ಇವರ ಪ್ರೇಮ ಗೀತೆಗಳು ಮಡಿವಂತಿಕೆಗೆ ಸಿಲುಕದೆ ಮುಕ್ತವಾದ ಪ್ರೇಮ ಲಹರಿಯಾಗಿದೆ. ಕೆ.ಎಸ್. ನರಸಿಂಹ ಸ್ವಾಮಿಯವರು 'ಸಖ್ಯ ಎಂದರೆ, ಪ್ರೀತಿಯ ಅರಸಿ (ಪತಿ) ಯೊಂದಿಗೆ ಸುಖ-ದುಃಖಗಳನ್ನು ಮರೆಯದಂತೆ ಮೆಲಕು ಹಾಕುವ ಸಹಜ ಫಲಕವಾಗಿದೆ' ಎಂದಿದ್ದಾರೆ. ಗುರುಲಿಂಗ ಕಾಪಸೆ; 'ಸಖ್ಯವು ಭಾವ ಪ್ರಧಾನ ರೂಪದ್ದು, ಅದರಲ್ಲಿ ಇರುವ ನೋವು-ನಲಿವುಗಳಿಗೆ ಸ್ಪಂಧಿಸಿ ಸ್ನೆಹರೂಪದ ಪ್ರೀತಿಯ ಸಂಚಯವೇ ಸಖ್ಯವಾಗಿದೆ'

ಎಂದಿದ್ದಾರೆ. ದ.ರಾ.ಬೇಂದ್ರೆಯವರ ಪ್ರಕಾರ ಸಖ್ಯ ಎಂದರೆ, 'ಸಖಿ-ಸಖಿ-ಸಖಿ ಎಂಬ ಹಾಡು ಬಾನಿನಿಂದ ಬಾನಿಗೆ ತಾನಾಗಿ ತೂಗುತ್ತಾ ಸಖ-ಸಖಿಯರು ಸಮಸುಖಿಗಳಂತೆ ನಿರಂತರವಾಗಿ ಸಾಗುವುದನ್ನೇ ಸಖ್ಯ' ಎನ್ನುವೆ ಎಂದಿದ್ದಾರೆ.

ಸಖ್ಯದ ಮೂಲ ಉದ್ದೇಶ ಪ್ರೀತಿಯನ್ನು ಸ್ನೇಹಭಾವದಿಂದ ಬೆಳೆಸಿ, ಪರಸ್ಪರ ಹಂಚಿಕೊಳ್ಳುವುದೇ ನಿಜವಾದ ಸಖ್ಯ. ಇಂತಹ ಸ್ನೇಹ, ಪ್ರೀತಿಯ ರಸಪಾಕವನ್ನು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಹೊಂದಿವೆ. ಸಖೀಗೀತ ಬೇಂದ್ರೆಯವರ ವಿಭಿನ್ನ ಕಾವ್ಯಾಭಿವ್ಯಕ್ತಿಗೆ ಕನ್ನಡಿಯಾಗಿದೆ. ವಿಶಿಷ್ಟ ವ್ಯಕ್ತಿತ್ವಗಳನ್ನೊಳಗೊಂಡ ಕವಿತೆಗಳನ್ನು ಬೇಂದ್ರೆಯವರ ಬರವಣಿಗೆಯಲ್ಲಿ ಕಾಣಬಹುದು. ಕಾಮಿ-ಕವಿ-ಭಕ್ತ ವ್ಯಕ್ತಿತ್ವಗಳ ಮೂರೂ ಮುಖಗಳು 'ಮೇಘದೂತದ ಪೀಠಿಕೆ' ಭಾಗದಲ್ಲಿ ಮತ್ತು 'ಸಖೀಗೀತ'ದಲ್ಲಿ ವ್ಯಕ್ತವಾಗಿದೆ. 'ಸಖೀಗೀತ'ದಲ್ಲಿ ಕಾಮಿ ಮತ್ತು ಕವಿಯ ವ್ಯಕ್ತಿತ್ವಗಳ ವಿಕಾಸ ಮುಖ್ಯವಾಗುವುದು. ಕಾಮಿ ಮತ್ತು ಕವಿ ಬೇಂದ್ರೆ ವ್ಯಕ್ತಿತ್ವದ ಬೇರೆ ಬೇರೆ ರೂಪಗಳಾಗಿವೆ.

ಸಖಿ ನಮ್ಮ ಸಖ್ಯದ ಆಖ್ಯಾನ ಕಟು-ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟ
ತೊಡವಾಗಿ ತಿರುಗೊಮ್ಮೆ ನಾಧರಿಸಲೆ
-ಸಖೀಗೀತ

ಕಾವ್ಯದ ಪ್ರಾಸ್ತಾವಿಕ ಭಾಗದಲ್ಲಿ ಮೂಡಿ ಬಂದಿರುವ ಈ ಸಾಲುಗಳನ್ನು ತನ್ನ ಸಖಿಗಾಗಿ ಕಾಯ್ದಿರಿಸುವಂತೆ ಕಾಣುತ್ತದೆ. ಅನುಭವದ ಸ್ಮೃತಿಗಳನ್ನು ನೆನೆಯುತ್ತಾ, ಕಳೆದ ಬದುಕಿನ ಪುಟಗಳನ್ನು ಮೆಲುಕು ಹಾಕಿದ್ದಾರೆ. ಲೌಕಿಕವಾದ ಸಾಮಾನ್ಯ ಅರ್ಥವನ್ನು ಮೀರಿ ವಿಶಿಷ್ಟ ಅರ್ಥವನ್ನು ಹೊರ ಚೆಲ್ಲಿದೆ. ಇಲ್ಲಿನ ಸಖ ತನ್ನ ಸಖಿಯನ್ನು ದೈವ ತಂದ ವರವೆಂದೇ ಭಾವಿಸುತ್ತಾನೆ. ಕಾಮದ ಸ್ವರೂಪ ವಿಭಿನ್ನ ನೆಲೆಯಲ್ಲಿ ಮೂಡುತ್ತದೆ. 'ಕಾಮ'ವು ಕಬ್ಬಿನ ಸಿಪ್ಪೆ ಆಗಬಹುದು ಅಥವಾ ಅದರ ರಸದಂತೆ ದಿವ್ಯವೂ ಆಗಬಹುದು. ಬೇಂದ್ರೆಯವರ ಕಾವ್ಯ ಕಬ್ಬಿನ ರಸದಂತೆ ನವರಸಗಳೂ ಅದರಲ್ಲಿ ಬೆರೆತಿವೆ.

ಬೇಂದ್ರೆಯವರ ದಾಂಪತ್ಯದ ಬದುಕು ಗಟ್ಟಿಯಾದ ಬುನಾದಿಯಿಂದ ವಿಕಾಸವಾಗಿದೆ. ವಿವಾಹದ ಚೌಕಟ್ಟಿನಲ್ಲಿ ಸಂಬಂಧಗಳು ಗಟ್ಟಿಗೊಳ್ಳಬೇಕು. ಆಗ ಮನದ ಸಂಬಂಧಗಳು

ಗಟ್ಟಿಗೊಳ್ಳುತ್ತಾ ಹೋಗುವುದು. ಬೇಂದ್ರೆಯ ಕವಿತೆಗಳು 'ಕಾಮ' ಎನ್ನುವ ಪದಕ್ಕೆ ವಿಶಾಲಾರ್ಥವನ್ನು ಸೂಚಿಸುತ್ತವೆ. ದಾಂಪತ್ಯದ ಬೆಸುಗೆಯನ್ನು ಕುರಿತ ಅವರ ಚಿಂತನೆ ವಿಶಿಷ್ಟವಾದದ್ದು.

ನೀನು ದೊಡ್ಡವಳಾದೆ ಮೈ ಸಲಿಗೆ ಬೆಳೆಸಿದೆ
ಏಕಾಂತಕೆಳಸಿದೆ ಎಳೆ-ಕೆಳದಿಯೆ
ಏನು ಸಂಭ್ರಮವದು ಹರೆಯದ ಹಬ್ಬವು
ಕನಸೂ ಮನಸೂ ಹೆಣೆದು ಬೆಳೆ ಬೆಳೆದವೇ.
- - - - - - - - - - - - - - - - -
- - - - - - - - - - - - - - - - -
ಹಗಲೆಲ್ಲೊ ಹಾರಿದವು ಇರುಳೆಲ್ಲ ಜಾರಿದವು
ಋತು ನಿದ್ದೆಯಾಡಿದವು ಬುಗುರಿಯೊಲೇ
ನಗೆಯ ನೊರೆಯ ಕೆಳಗೆ ಮೊರೆವ ಬಯಕೆಯ ಕಡಲು
ತೆರೆ ತೆರೆ ತೆರನಾಗಿ ತೆರಯುತಿರೆ

-ಸಖೀಗೀತ

ಕಾಮವು ವಿಜೃಂಭಿಸುವ ಬಗೆಯನ್ನು ಕವಿ ಹೇಳಿದ್ದಾರೆ. ಬಯಕೆಯ ಕಡಲು ಹರಿದಾಗ ಸಖ-ಸಖಿಯರ ದಾಂಪತ್ಯದ ಬದುಕು ಪ್ರಾರಂಭವಾಗುವುದು. ಮನಸ್ಸಿನ ತೆರೆಯ ಮೇಲೆ ಕಾದು ಕುಳಿತಿದ್ದ, ಕನಸುಗಳು ಮನಸ್ಸುಗಳೊಂದಿಗೆ ಬೆಸೆದಾಗ ಅದು ಬದುಕಿನ ದಾರಿಗೆ ಪ್ರಥಮ ಹೆಜ್ಜೆಯಾಗುವುದು.

ಯಕ್ಷ-ಯಕ್ಷಿಯರ ಬದುಕಿನಲ್ಲಿ ವಿರಹ ಎಂಬುದು ಸಹಜವಾಗಿ ಮೂಡಿ ಬಂದರೆ, 'ಸಖೀಗೀತ'ದಲ್ಲಿ ಅತ್ಯಂತ ಖಾಸಗಿ ಸಮಸ್ಯೆಗಳಿಂದ ಇವರಿಬ್ಬರ ಸಂಬಂಧಗಳ ನಡುವೆ ಭಾರಿ ಆಘಾತಗಳನ್ನು ಉಂಟು ಮಾಡುತ್ತವೆ. ಈ ಆಘಾತಗಳು ಅವರಲ್ಲಿದ್ದ ಒಲುಮೆಯನ್ನು ಇನ್ನೂ ಗಟ್ಟಿಗೊಳಿಸುತ್ತದೆ. ಯಾತನೆಯ ನಡುವೆಯೂ ಕಾಮ ಉರಿದು ಮತ್ತಷ್ಟು ಪಕ್ವವಾಗುತ್ತದೆ. ಮನಸ್ಸಿನ ಪ್ರಣಯದ ಕಾವು ಉನ್ನತ ಸ್ಥಿತಿಯಲ್ಲಿ ಪರಿವರ್ತನೆಯಾಗುವ ಬಗೆಯನ್ನು ಕವಿ ಸ್ಪಷ್ಟವಾಗಿ ಹೇಳಿದ್ದಾರೆ.

ಎಲ್ಲಿಂದಲೊ ಬಂದೊಂದು ಸೌಂದರ್ಯ-ಝರಿಯಿಂದ
ಎದಿ ಎದೆಗೂ ಕಾರಂಜಿ ಪುಟಿಯುತ್ತಿದೆ
ಯಾರಿಂದೋ ಚಲಿಸುವ ಪ್ರಾಣವ ಸೂತ್ರವು
ಪುರುಷ-ಪ್ರಕೃತಿಗಳನು ಕುಣಿಸುತ್ತಿದೆ.

'ಸಖೀಗೀತ' ಕಾವ್ಯವು ಲೋಕ ಕಲ್ಯಾಣದ ಅರಿವಿನಲ್ಲಿ ಮೂಡಿ ಬಂದಿದೆ, ದಾಂಪತ್ಯದಲ್ಲಿ ಕಾಮ ಸಹಜವಾದ ಪ್ರಕ್ರಿಯೆ. ಆದರೆ ಅದು ಅಷ್ಟಕ್ಕೆ ಸೀಮಿತವಾಗದೆ ಪ್ರೇಮವಾಗಿ ಅರಳಬೇಕು. ಕಾಮದ ಬಗ್ಗೆ ಉದಾತ್ತ ದೃಷ್ಟಿಯನ್ನು ತೋರಿ ಅದು ಲೋಕ ಕಲ್ಯಾಣಕ್ಕಾಗಿ ದರ್ಶಿಸಬೇಕು.

ಅನ್ನಕ್ಕೆ ಬಾಳಾಗಿ ಕಾಮಕ್ಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಲೆದುದು
ಬಾಳೆಲ್ಲ ಬದುಕಲ್ಲ ; ಜೀವ ಜೀವಕೆ ಉ-
ದ್ದೀಪನವಾದುದೆ ಜೀವನವು'.

ಪತಿ-ಪತ್ನಿಯರು ಅರಿತು ಬಾಳುವುದೇ ಜೀವನವು. ದಾಂಪತ್ಯ ಜೀವನದ ತತ್ವಗಳನ್ನು ಕವಿ ಎಳೆ-ಎಳೆಯಾಗಿ ವಿವರಿಸಿದ್ದಾರೆ. ಲೋಕ ಕಲ್ಯಾಣದ ಆಶಯವು ಈ ಕವಿತೆಗಳಲ್ಲಿ ಎದ್ದು ಕಾಣುತ್ತದೆ. ಅವರ ಕಾವ್ಯಗಳನ್ನು ಕುರಿತು, 'ಬೇಂದ್ರೆಯವರ ಕಾವ್ಯದಲ್ಲಿ ಜಾನಪದ ಸತ್ವದೊಂದಿಗೆ ಅಪೂರ್ವವಾದ ನಾಗರೀಕ ಪರಿಷ್ಕಾರವಿದೆ' ಎನ್ನುತ್ತಾರೆ ನ.ಹ. ಕಟಗೇರಿಯವರು. 'ಬೇಂದ್ರೆ ಕಾವ್ಯ ಪುಸ್ತಕದ ಅಧ್ಯಯನವಾಗದೆ, ಜೀವನದ ಅಧ್ಯಯನವೂ ಆಗಿದೆ. ಅವರ ಕಾವ್ಯ ಸಂಸ್ಕಾರಕ್ಕಿಂತ ದೊಡ್ಡದು' ಎಂದು ಕೀರ್ತಿನಾಥ ಕುರ್ತಕೋಟಿಯವರು ಅಭಿಪ್ರಾಯ ಪಡುತ್ತಾರೆ. ಸಮಾಜವನ್ನು ತಿದ್ದುವ ಕೆಲಸವನ್ನು ಅವರ ಕವಿತೆಗಳು ಮಾಡಿವೆ. ಕಹಿಯಾದ ಬಡತನವನ್ನು ಸಿಹಿಯಾಗಿ ಕಾಣುವ ಬಗೆಯನ್ನು ತೋರಿಸಿಕೊಟ್ಟಿದೆ.

'ಬಾಳಿನ ಬೆಂಕಿಗೆ ಮೈ ಬೆಂದು ಮನ ನೊಂದು
ಬಲುಮೆಯ ಒಲುಮೆಯ ಕುಲುಮೆಯಲೇ
ತಾಳಿಕೆ ಬರುವಂಥ ಉಕ್ಕಾಗಿ ಬರುತಿದೆ
ಮುಕ್ಕಾದ ಮೊನೆಯೀಗ ಮಸೆಯುತಿರೆ'.

ಕಾಮವು ವಿಕೃತವೂ ಆಗಬಹುದು. ಸಕೃತವೂ ಆಗಬಹುದು. ಕಾಮವು ಸಕೃತವಾದರೆ ಅದು ಪ್ರೇಮವಾಗುವುದು. ಸೃಷ್ಟಿಗೆ ಬ್ರಹ್ಮನಾದಂತೆ, ಸ್ಥಿತಿಗೆ ವಿಷ್ಣುವಾದಂತೆ,

ಕಾಮಕ್ಕೆ ಮನ್ಮಥ ಎಂಬುದು ರೂಢಿಗತವಾಗಿ ತಿಳಿದು ಬಂದಿರುವ ಸತ್ಯ. ತಾರಕನ ಸಂಹಾರಕ್ಕಾಗಿ ಗಿರಿಜಾ ಕಲ್ಯಾಣ ಹಾಗೂ ಷಣ್ಮುಖ (ಕುಮಾರ) ನ ಜನನ ಅವಶ್ಯವಾಗುತ್ತದೆ. ಇದು ಸಾಧ್ಯವಾಗಬೇಕಾದರೆ ಶಿವನ ತಪೋಭಂಗವಾಗಬೇಕು. ಅದನ್ನು ಕಾಮ ಮಾಡಬಲ್ಲ ಎಂದು ಕಾಮನನ್ನು ಮುಂದೆ ನೂಕುತ್ತಾರೆ. ಆಗ ಶಿವನು ತನ್ನ ಮೂರನೇ ಕಣ್ಣು ತೆರೆದು ಕಾಮದಹನ ಮಾಡುತ್ತಾನೆ. ಇದರ ಫಲವಾಗಿ ಕಾಮ ಮತ್ತು ರತಿಯರ ಅಗಲುವಿಕೆ. ಯಕ್ಷ–ಯಕ್ಷಿಯರ ಅಗಲಿಕೆಯು ಕುಭೇರನ ಶಾಪದಿಂದ ಪ್ರಾಪ್ತಿಯಾಗುವುದು. ಯಕ್ಷಿಯ ಮೇಲೆ ಉಂಟಾಗುವ ಶೃಂಗಾರ ಭಾವನೆಗಳಿಂದ ಗರಿ ಬಿಚ್ಚಿ ಹಾಡಲುದ್ಯುಕ್ತನಾಗುತ್ತಾನೆ.

ಯಕ್ಷಿಯನ್ನು ನೆನೆಯುತ್ತಾ ಆಕೆಯ ಸೌಂದರ್ಯ ಛಾಯೆಯನ್ನು ವರ್ಣಿಸಿದ್ದಾನೆ.

ಬಳ್ಳಿಯಲ್ಲಿ ಆ ಬಳುಕು ಮೈಯ್ಯು ಹುಲೆಯಲಿ ಬಿದುರುಗಣ್ಣು
ಮುಖದ ಛಾಯೆ ಚಂದ್ರನಲಿ ಗರಿಗಳಲಿ ಹೆಳಲ ಭಾರವನ್ನು
ನದಿಯ ಹರಿತದಲಿ ಹುಬ್ಬು ಮುರಿತವನು ಕಾಣಬೇಕು ಎಂದೆ
ಇಷ್ಟು ಕೂಡ ಸಾದೃಷ್ಯ ಕಾಣದೆ, ಚಂಡಿ, ನೊಂದೆ, ಬೆಂದೆ

ಉತ್ತರ ಮೇಘ – 41

ಕವಿಯು ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲಿ ತನ್ನ ಪ್ರೇಯಸಿಯರನ್ನು ಕಂಡಿದ್ದಾರೆ. ರಸ ವೈವಿಧ್ಯತೆಯ ಮಿಲನವನ್ನು ಇಲ್ಲಿ ಕಾಣಬಹುದು. ಬೇಂದ್ರೆಯವರು ಪ್ರೀತಿಯನ್ನು ವಿವಿಧ ಆಕೃತಿಗಳಲ್ಲಿ ಅಲಂಕರಿಸುತ್ತಾರೆ. ಪ್ರಣಯ, ಪ್ರೀತಿ, ಕಾಮ ಎಂಬ ಪದಗಳಿಗೆ ಬದಲಾಗಿ 'ಒಲವು' ಎಂಬ ಪದವನ್ನು ಬೇಂದ್ರೆಯವರು ಹೆಚ್ಚು ಬಳಸಿದ್ದಾರೆ. ಒಲವು ಬೇಂದ್ರೆಯವರ ಜೀವನದ ಕೇಂದ್ರ ತತ್ವ.

ಬೇಂದ್ರೆಯವರು ಕಾಮವನ್ನು ಅದರ ಇಂದ್ರಿಯ ವಾಸ್ತವ ಆಧ್ಯಾತ್ಮಕ, ಆದರ್ಶಗಳೆರಡರ ಮಟ್ಟಗಳಲ್ಲೂ ತೀವ್ರವಾಗಿ ಪರಿಭಾವಿಸಿ ತತ್ವೀಕರಿಸುತ್ತಾರೆ. ಕಾಮವೆನ್ನುವುದು ಇಲ್ಲಿ ಪರಿವರ್ತನಶೀಲ ತಾತ್ವಿಕತೆಯಿಂದ ಪ್ರಭಾವಕ್ಕೊಳಗಾಗಿ ದೈವೀ ಏಕದ ಅರಿವಿಗೂ ಕಾರಣವಾಗುತ್ತದೆ.

ಅನ್ನಪ್ರಾಣಗಳ ಮಿಥುನದಂತೆ ಮೈ ಎರಡು ಕಲೆತು ಬೆರೆತು
ಮನದ ಕಾವಿನಲಿ ಕಾಮನಾಗಿ ಮನದಾಚೆಗೇನೂ ಅರಿತು॥
ಚಿತ್ತದಲಿ ನಿಷ್ಕಾಮರತಿಯ ರಸಪಾಕವಾಗಿ ನಿಂತು
ಧಾರೆಗೆಡೆದ ಭಗವಂತನಲಿ ಚಿರಭಕ್ತಿಯಾಗಿ ಬಂತು॥

– ಕನ್ನಡ ಮೇಘದೂತ ಪೀಠಿಕೆ

ಈ ಪೀಠಿಕಾ ಸಾಲುಗಳು ಕಾಮ ಎನ್ನುವ ಲೌಕಿಕ ಪದದ ಅರ್ಥವನ್ನು ದಾಟಿ ಒಂದು ನವೀನವಾದ ಅರ್ಥ ಕೊಡುತ್ತದೆ. ಭಕ್ತಿ ಎನ್ನುವ ಪರಮಾರ್ಥವನ್ನು ಇಲ್ಲಿ ಕಾಣಬಹುದು. ಇಲ್ಲಿ ಚಿತ್ತರಗೊಂಡಿರುವ ಪ್ರೇಮಕಾಮಗಳ ತತ್ವಗಳ ದರ್ಶನ 'ಸಖೀಗೀತ'ದಲ್ಲೂ ವಿಸ್ತರಿಸಿಕೊಂಡಿದೆ.

ಬೇಂದ್ರೆಯವರ ಕವಿತೆಗಳ ಹಾದಿ ಜೀವನದ ಉನ್ನತೀಕರಣ ಹಾದಿಯಾಗಿದೆ. ಕಾಮ-ಪ್ರೇಮ ಎಂಬುದು ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ಆವರಿಸುತ್ತದೆ. ಅದು ಆವರಿಸುವ ಬಗೆಯನ್ನು ಡಿ.ಆರ್. ನಾಗರಾಜ್ ಬೇಂದ್ರೆಯವರ ಕಾವ್ಯದಲ್ಲಿ 'ಕಾಮ' ಎಂಬ ಲೇಖನದಲ್ಲಿ ವಿವರವಾಗಿ ವಿವರಿಸಿದ್ದಾರೆ. 'ಬೇಂದ್ರೆ ಯವರ 'ಕಾಮ' ಇಂದ್ರಿಯ ವಾಸ್ತವ-ಆಧ್ಯಾತ್ಮಿಕ ಆದರ್ಶ ಎರಡೂ ಮಟ್ಟಗಳಲ್ಲಿ ಪರಿಭಾವಿಸಿ ತತ್ವೀಕರಿಸುತ್ತಾರೆ' ಎಂದು ಅಭಿಪ್ರಾಯಪಟ್ಟಿದ್ದಾರೆ.

ಬ್ರಹ್ಮ ಹೃದಯದಲ್ಲಿ ಜನಿಸಿದಿಚ್ಛೆ ಕೊನೆಗಾಣಲೆಂದು ಬಾಳಿ
ಕಂಡಕಡೆಗೂ ಶತರೂಪೆಯಲ್ಲಿ ಮಧು-ರೂಪ-ರೂಪತಾಳಿ॥
ಜಗದ ತಂದೆ-ತಾಯಿಯರ ಕಂದ ಅವತರಿಸೆ ಜೀವನಾಗಿ
ಬಂತು ಪೂರ್ವದಲಿ, ದೇವ-ಕಾಮವೇ ಕಾಮ-ದೇವನಾಗಿ

– ಕನ್ನಡ ಮೇಘದೂತ ಪೀಠಿಕೆ

ಮೂಲದಲ್ಲಿ ಏಕವಾಗಿದ್ದ ಬ್ರಹ್ಮ ಅನೇಕವಾಗಬೇಕೆಂಬ ಇಚ್ಛೆಯೇ ಮೂಲ ಕಾಮ. ಇಡೀ ಜಗತ್ತು ಸೃಷ್ಟಿಯಾದದ್ದೆ ಬ್ರಹ್ಮಹೃದಯದ ಇಚ್ಛೆಯಾದ ಕಾಮದಿಂದ. ಆದ್ದರಿಂದಲೇ ಕಾಮದ ಅತ್ಯಂತ ಉತ್ಕಟ ಸ್ಥಿತಿಯೆಂದರೆ ಈ ಐಕ್ಯಕ್ಕೆ ಹಿಂದಿರುಗುವಿಕೆ, ಅನಾದಿ ಕಾಲದ ಈ ಕ್ರಮವೇ ಜೀವನ ಲೋಕಕ್ಕೆ ಭೂಮಿಗೆ ಹಬ್ಬಿದೆ. 'ಈ ಕಾಮದ ಪ್ರಕ್ರಿಯೆ ಎಲ್ಲಿ ನಡೆದರೂ ಅಲ್ಲಿ ಅನುಭವಕ್ಕೆ ಬರುವುದು, ಈ ದ್ವಂದ್ವ-ದ್ವೈತ-ತತ್ವಗಳೇ' ಎಂದು ಕಾಮದ ಬಗ್ಗೆ ಡಿ.ಆರ್. ನಾಗರಾಜ್ ಅಭಿಪ್ರಾಯ ಪಟ್ಟಿದ್ದಾರೆ.

ವಿರಹ ಪೂತರತಿ ಜೀವ ಮೂಲ ಸತಿ ಚಿತ್ತರಂಗದಲ್ಲಿ
ಸಾಂಗವಾಗಿ ಮೈಗೂಡಿಕೊಂಡಳೊ ಆ ಅನಂಗನಲ್ಲಿ॥
ಋತುವಿನೊಂದು ಪ್ರೇರಣೆಗೆ ಕೂಡುವುದು ಒಲ್ಲದೇನು ಪಶುವು
ಪ್ರೌಢರತಿಯ ಕೈಗೂಸು ಆಗಿ ಬೆಳೆದಿಹುದು ಕಾಮಶಿಶಿವು॥

ತನ್ನ ಕಿಚ್ಚಿನೊಳೆ ಚೆಂಕಿಸುಟ್ಟ ಬೆಳಕಾಗಿ ಮಿಂಚಬಹುದು
ಮೂಲ ಕಾಮದಲಿ ವಿರಹ ಬೆಳೆದು ಸುಪ್ರೇಮವರಳಲಹುದು||
ಜನ್ಮಜಾತ ಕುತುಕಕ್ಕೆ ರಮ್ಯತವನಿಧಿಯ ಹಾಗೆ ಭವ್ಯ
ಸತ್ಯಕ್ಕಾಗಿ ನೀರಡಿಸಿ ನಿಂತ ಸೌಂದರ್ಯದಂತೆ ದಿವ್ಯ||

– ಕನ್ನಡ ಮೇಘದೂತ ಪೀಠಿಕೆ

'ಭಾರತೀಯ ಸಂಸ್ಕೃತಿಯ ಅಧಿದೇವತೆಗಳಾದ ರತಿ–ಮನ್ಮಥರ ಬಗ್ಗೆ ಹೊಸ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ. ಪುರಾಣಗಳ ಪ್ರಕಾರ ರತಿ ಪ್ರತಿ ಋತುವಿನಲ್ಲೂ ಸಾಯುತ್ತಾಳೆ. ಆದರೆ ನಮ್ಮಲ್ಲಿ ಈ ರೀತಿಯಾಗಿಲ್ಲ. ಕಾಮ ಅನಂಗ, ರತಿ ಸ್ಥಾಯಿಯಾಗಿದೆ. ರತಿ–ಕಾಮರ ಪರಿವರ್ತನೆಯನ್ನು ಕುರಿತು 'ಸಖೀಗೀತ'ದಲ್ಲೂ ಬೇಂದ್ರೆಯವರು ವಿವರಿಸಿದ್ದಾರೆ.

ಸತಿಯರ ಹೃದಯಸ್ಥ ಸುಪ್ತರತಿಯ ತಾನು
ತಿಳಿದೆದ್ದನಂಗನಾಲಿಂಗಿಸಿರೆ
ಮತಿಮಂಥನದಿಂದಾದ ಮನ್ಮಥನನಿರುದ್ಧ
ಉಷೆಯ ಕನಸಿನ ಕೂಡಾ ಕೂಡುತಿರೆ

ಕಾಮ ಅನಂಗನಾದ ವ್ಯಕ್ತಿತ್ವ ಉನ್ನತೀಕರಣಕ್ಕೆ ಏರುತ್ತದೆ. ವ್ಯಕ್ತಿತ್ವ ವಿಕಾಸದ ಬಗೆಯನ್ನು ಇಲ್ಲಿ ಹೇಳಲಾಗಿದೆ. ಸಾಂಸ್ಥಿಕ ಸಂಬಂಧವಾಗಿ ಬಂದ ಪತ್ನಿ ಸಖಿಯಾಗಿ ರೂಪುಗೊಳ್ಳುವ ಬಗೆಯೇ ಸಖೀಗೀತವಾಗಿದೆ. ಪತ್ನಿ ಸಖಿಯಾಗಲು ಅವರ ವ್ಯಕ್ತಿತ್ವಗಳು ಬೆರೆಯಬೇಕು. ಮನಸ್ಸುಗಳು ಮಾಗಿ ಹಣ್ಣಾಗಬೇಕು, ದೇಹದ ಆತ್ಮಗಳು ಒಂದಾಗಬೇಕು. ಆಗ ಮಾತ್ರ ಸಾಂಸ್ಥಿಕ ಸಂಬಂಧ ವೈಯಕ್ತಿಕ ಸಂಬಂಧವಾಗಲು ಸಾಧ್ಯ. ಇಂತ ವೈಯಕ್ತಿಕ ಸಂಬಂಧದ ಪೂರ್ಣ ರಸಧಾರೆಯನ್ನು ಬೇಂದ್ರೆ ಹರಿಸುವ ಪ್ರಯತ್ನ ಮಾಡಿದ್ದಾರೆ.

ಯಕ್ಷ–ಯಕ್ಷಿಯರ ವಿರಹ ಧರ್ಮ ವಿರುದ್ಧ ಕಾಮವೆನಿಸಿ ಜೀವೋನ್ನತಿಯ ಹಾದಿ ಹಿಡಿದರೆ, ಸಖೀಗೀತದ ವಿರಹ, ಕಷ್ಟ, ಸಂಕಟ ಬಿರುಕುಗಳಲ್ಲಿ ಬದುಕಿ ಜೀವೋನ್ನತಿಯ ಹಾದಿ ಎನಿಸಿದೆ. ಸಾಮಾನ್ಯವಾಗಿ ಬದುಕಿಗೆ ಎದುರಾಗುವ ಸಮಸ್ಯೆಗಳು ಬೇಂದ್ರೆಯವರ ದಾಂಪತ್ಯ ಜೀವನದ ಮೇಲೆ ಬಾರೀ ಆಘಾತವನ್ನು ಉಂಟು ಮಾಡಿತು. ಅವರಲ್ಲಿದ್ದ ಭಾವನೆಗಳ ಮೇಲೆ ಧಕ್ಕೆ ಉಂಟಾಯಿತು. ಇಂತಹ ದುಃಖದ ಸಂದರ್ಭವನ್ನು ಕುರಿತು

ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲಿ
ಮೂಕ ಮೌನವು ಒಂದು ಶಾಪದೊಲು
ತಾಪವ ಕೊಡುವುದು ತಾ ಪರಿಹರಿಸದು
ಜೀವಯಾತನೆಯನ್ನು ಅದು ಎಂದಿಗು

ತಮ್ಮ ಸಂಸಾರದಲ್ಲಿ ಅನುಭವಿಸಿದ ಮೂಕ-ಮೌನವನ್ನು ಹೇಳಿದ್ದಾರೆ. ಮೌನ ಸಖ-ಸಖಿಯರ ನಡುವೆ ವಿರಸಕ್ಕೆ ದಾರಿ ಮಡಿಕೊಡುವುದು. ಮೌನ ಒಂದು ಶಾಪ. ಮೌನ ಸಾಗುತ್ತಲೇ ಇದ್ದರೆ ಬದುಕು ತಾಪದಲ್ಲೇ ಬೇಯುವಂತಾಗುತ್ತದೆ. ಮೌನ ದಾಂಪತ್ಯ ಜೀವನದಲ್ಲಿ ಸಲ್ಲದು ಎಂಬುದನ್ನೂ ಹೇಳಿದ್ದಾರೆ.

ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ
ವಿವ್ವಲತೆ ಬೆಳೆಯುವುದಿಬ್ಬರಲಿ
ಇಬ್ಬರ ಮನವಾಗ ಇಬ್ಬಗೆಯಾವುದು
ಒಬ್ಬಗೂ ಸುಖವಿಲ್ಲ ಬದುಕಿನಲಿ

ಇಬ್ಬರ ಮನಸ್ಸುಗಳ ನಡುವೆ ಬಿರುಕು ಕಾಣಿಸುವುದಕ್ಕೆ ಮುಂಚೆ ಒಂದಾಗುವ ಬಯಕೆ ಇಲ್ಲಿ ವ್ಯಕ್ತವಾಗಿದೆ. ಮನಸ್ಸುಗಳು ಹೊಡೆದ ಕನ್ನಡಿಯಾಗುವುದಕ್ಕೆ ಮುಂಚೆ ಸೇರಿ ಬಾಳುವ ಆಶಯವನ್ನು ಇಲ್ಲಿ ಹೇಳಲಾಗಿದೆ.

ಸಖೀಗೀತ ಆತ್ಮ ಕಥನವಾಗಿರುವಂತೆಯೇ, ಭಾರತೀಯ ದಾಂಪತ್ಯ ಜೀವನದ ಒಂದು ಚಿತ್ರವೂ ಹೌದು. ವಿವಾಹ, ವಿವಾಹೋತ್ತರ ಪ್ರಣಯ ಬಸಿರು, ಬಯಕೆ, ಸಂಬಂಧಗಳನ್ನು ಕಳೆದುಕೊಳ್ಳುವುದು ದುಃಖ, ಗಂಡ ಹೆಂಡಿರ ವಿರಸ, ಕೋಪ, ಪ್ರೀತಿ, ದೇಶದ ರಾಜಕೀಯದಿಂದ ಬದುಕಲ್ಲಾಗುವ ಪರಿವರ್ತನೆ ಎಲ್ಲವೂ ಸಾಮಾನ್ಯರ ಬದುಕಲ್ಲಾಗುವ ಸಂಗತಿಗಳಾಗಿವೆ.

'ಸಖೀಗೀತ'ದ ವಸ್ತು ಸಾಮಾಜಿಕ ಪ್ರಜ್ಞೆಯಿಂದ ಹೊರಹೊಮ್ಮಿದೆ. 'ಹುಬ್ಬಳಿಯಾಂವಾ' ಕವನದಲ್ಲಿ ಒಬ್ಬ ವೇಶ್ಯೆಯ ಮನಸ್ಸಿನಲ್ಲಿ ಉಂಟಾಗುವ ತಲ್ಲಣಗಳ ಬಗ್ಗೆ ಕುರಿತು ಹೇಳಲಾಗಿದೆ. ಆಕೆಯಲ್ಲಿ ಮೂಡುವ ಭಾವನೆಗಳು ಸಂಸ್ಕಾರದ ಪ್ರತೀಕವಾಗಿದೆ. 'ಹುಬ್ಬಳ್ಳಿಯಾಂವಾ' ಕವನವನ್ನು ಕುರಿತು ಜಿ.ವಿ. ಕುಲಕರ್ಣಿಯವರು ಹೀಗೆ ಹೇಳಿದ್ದಾರೆ. 'ಬೇಂದ್ರೆಯವರು ವೇಶ್ಯೆಯರನ್ನು ಸಮಾಜದಿಂದ ಶೋಷಣೆಗೊಂಡ ಪತಿತರು ಎಂಬ ಭಾವನೆಯಿಂದ ಚಿತ್ರಿಸಿಲ್ಲ. ಅಂದಿನ ಸಮಾಜದಲ್ಲಿ ಕೆಲವರಿಗೆ ಕಟ್ಟಿಕೊಂಡ ಹೆಂಡತಿ ಒಬ್ಬಳಾದರೆ ಇಟ್ಟುಕೊಂಡ ಹೆಂಡತಿಯೂ ಇರುತ್ತಿದ್ದಳು. ಒಂದು ಅರ್ಥದಲ್ಲಿ

'ಇಟ್ಟು'ಕೊಂಡ ಸ್ತ್ರೀ ವೇಶ್ಯೆ ಕುಲದವಳು ಆಗಿದ್ದರೂ, ಅವಳು ಪತಿವ್ರತೆಯರಂತೆ ಒಬ್ಬನೆ ಪುರುಷನಿಗೆ ನಂಬಿಗಸ್ತಳಾಗಿ ಉಳಿಯುತ್ತಿದ್ದಳು. 'ಹುಬ್ಬಳ್ಳಿಯಾಂವಾ' ಕವನದಲ್ಲಿನ ವೇಶ್ಯೆ ಇಂತಹ ಪರಿಸರಕ್ಕೆ ಸೇರಿದ್ದಾಳೆ'.

ಹುಬ್ಬಳ್ಳಿಯ ವ್ಯಾಪಾರಿ ಶೆಟ್ಟರ ಹುಡುಗ ವಾರದಲ್ಲಿ ಮೂರು ಸಲ ಧಾರವಾಡಕ್ಕೆ ಪ್ರಯಾಣ ಮಾಡುತ್ತಾನೆ. ವ್ಯಾಪಾರದ ಉದ್ದೇಶದಿಂದ ಬಂದ ಆತನಿಗೆ ಊರು, ಹುಡುಗಿ ಎರಡೂ ಆಕರ್ಷಿಸುತ್ತದೆ. ಹುಬ್ಬಳ್ಳಿ ಹುಡುಗನ ಸ್ನೇಹ ವೇಶ್ಯೆಯೊಂದಿಗೆ ಬೆಳೆದಿರುತ್ತದೆ. ಕೊನೆಯ ಭೇಟಿಯಲ್ಲಿ ಮನಸ್ತಾಪಗೊಂಡು ಹೋದಂತ ಪ್ರಿಯಕರ ಬಾರದೆ ಇದ್ದುದನ್ನು ಕಂಡು ಅವಳ ಮನಸ್ಸು ತಳಮಳಗೊಂಡಿದೆ. ಜೊತೆಯಲ್ಲಿರುವ ಸಖಿಯರನ್ನು ಕುರಿತು ನಲ್ಲನ ಬರುವಿಕೆಯ ಬಗ್ಗೆ ವಿಚಾರಿಸುತ್ತಾ ದುಃಖಿತಳಾಗಿದ್ದಾಳೆ.

ಯಲ್ಲಿ ! ಮಲ್ಲಿ ! ಪಾರಿ ! ತಾರೀ ! ನೋಡೀರೇನವ್ವಾ ?  
ನಿಂಗೀ ! ಸಂಗೀ ! ಸಾವಂತರೀ ! ಎಲ್ಹಾನ ನನ್ನಾಂವಾ ?  
ಸೆಟ್ಟರ ಹುಡುಗ ! ಸೆಟಗೊಂಡ್ಹೋದಾ ! ಅಂತ ನನ್ನ ಜೀಂವಾ  
ಹಾದಿ ಬೀದೀ ! ಹುಡುಕತ್ಯೆತ್ರೇ ! ಬಿಟ್ಟ ಎಲ್ಲ ಹ್ಯಾಂವಾ

'ಸೆಟ್ಟರ ಹುಡುಗ ಸೆಟಗೊಂಡ್ಹೋದ' ಎಂಬ ಶಬ್ದ ಪ್ರಯೋಗದಲ್ಲಿ ಪ್ರಣಯ ಪ್ರಕೋಪಕ್ಕೆ ಹೋಗಿರುವುದನ್ನು ವ್ಯಕ್ತಪಡಿಸುತ್ತದೆ. ಪ್ರಿಯಕರ ಬಹಳ ಕಾಲ ಬರದೇ ಕಾಲ ಕಳೆಯಲು ಕಷ್ಟವೆನಿಸಿದಾಗ ಆತನ ನೆನಪಿನಲ್ಲಿ ಹಾಡಲುದ್ಯುಕ್ತಳಾಗಿದ್ದಾಳೆ. ಕವಿ, ವೇಶ್ಯಾ ಜೀವನ ತ್ಯಜಿಸಿ, ಆದರ್ಶ ಪ್ರೇಮ ಮಾಡುವ ವಿಧಾನವನ್ನು ಹೇಳಿದ್ದಾರೆ. ಕವನದ ಮುಕ್ತಾಯ ಪ್ರೇಮ ಭಕ್ತಿಯಾಗಿ ಮಾರ್ಪಾಡಾಗುವುದನ್ನು ಹೇಳುತ್ತದೆ.

ಒಲುಮೆ ಎಂಬುದು ಗಂಡು-ಹೆಣ್ಣಿನ ಮಧ್ಯೆ ಅರಳುವಂತ ಹೂವಾಗಿದೆ. ಇಬ್ಬರ ನಡುವಿನ ಸ್ನೇಹ ಶೃಂಗಾರವಾಗಿ ಪ್ರೇಮದ ಹುಟ್ಟುವಿಕೆಗೆ ಕಾರಣವಾಗುತ್ತದೆ. ಪ್ರೇಮ ಮುಂದುವರೆದು ಪರಿಪಕ್ವಗೊಂಡು ಆದರ್ಶ ಪ್ರೇಮವಾಗುತ್ತದೆ. ಸ್ನೇಹ ವಿಭಿನ್ನ ಆಯಾಮಗಳನ್ನು ಸೃಷ್ಟಿ ಮಾಡುತ್ತದೆ. ಒಮ್ಮೊಮ್ಮೆ ವಾತ್ಸಲ್ಯವಾಗಿ, ಸ್ನೇಹವಾಗಿ, ಮತ್ತೊಮ್ಮೆ ಭಕ್ತಿಯಾಗಿ ನಂತರ ಪ್ರೀತಿ, ಒಲುಮೆಯಾಗಿ ಜೀವನವನ್ನು ನಿಯಂತ್ರಿಸುತ್ತದೆ. ಆ ಆದರ್ಶ ಪ್ರೇಮವನ್ನೇ ಬೇಂದ್ರೆಯವರು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ತೋರಿಸಿದ್ದಾರೆ.

'ವಿರಹ' ಪೌರಾಣಿಕ ಕಥೆಯಲ್ಲಿ ಕೇವಲ ವಿರಹವಷ್ಟೇ. ಆದರೆ ವಾಸ್ತವಿಕ ಜೀವನದಲ್ಲಿ ವಿರಹವೆಂಬುದು ಜೀವನದ ಕಷ್ಟಗಳ, ಸಂಕಟಗಳ, ಬಿರುಕುಗಳುಳ್ಳ, ಹೊಡೆತಗಳಿಗೆ ಸಿಕ್ಕಿ ಎಲ್ಲವನ್ನೂ ಮೀರಿ ಪ್ರೀತಿಯಲ್ಲಿ ಲೀನವಾಗುತ್ತದೆ. ಆಂಡಯ್ಯನ 'ಕಬ್ಬಿಗರ ಕಾವ್ಯ'ವನ್ನು ಕುರಿತು, 'ಕಬ್ಬಿಗರ ಕಾವ್ಯ-ಕವಿಗಳ ರಕ್ಷಕ ಎಂಬ ಹೆಸರುಂಟು-ಕಾಮ ರತಿಯರ ವಿರಹ-ಮಿಲನಗಳನ್ನು ಆ ಕಾವ್ಯ ವಿವೇಚಿಸುತ್ತದೆ. ವಿರಹವೇ ನರಕ, ಮಿಲನವೇ ಸ್ವರ್ಗ ಎಂಬೀ ಮಾತಿನಲ್ಲಿಯ ಅರ್ಥವನ್ನು ಇನ್ನೂ ಪೂರ್ಣವಾಗಿ ಈ ಜಗತ್ತು ಅರಿತುಕೊಳ್ಳಬೇಕಾಗಿದೆ. ಎಂದು ಬೇಂದ್ರೆಯವರು ಭಾರತೀಯ ಜ್ಞಾನಪೀಠ ಪ್ರಶಸ್ತಿ ಪ್ರಧಾನದ ಸಂದರ್ಭದಲ್ಲಿ ನೀಡಿದ ಭಾಷಣದಲ್ಲಿ ಗಂಡು-ಹೆಣ್ಣಿನ ಸಂಗಮಕ್ಕೆ ಒಂದು ವಿಶಾಲಾರ್ಥವಿದೆ. ಅದನ್ನು ಸಮಾಜ ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಸಂಕುಚಿತವಾದ ಅರ್ಥದಿಂದ ಹೊರಬಂದು ಅದರ ಮಧುರವಾದ ಭಾವನೆಗಳಿಗೆ ಸ್ಫುರಿಸಬೇಕು. ಆಗ ಮಾತ್ರ ಪ್ರತಿಯೊಬ್ಬ ಮನುಷ್ಯ ತನ್ನ ಸಾಂಸಾರೀಕ ಜೀವನದ ನಿಜವಾದ ಸವಿಯನ್ನು ಅನುಭವಿಸಲು ಸಾಧ್ಯ ಎಂದು ಹೇಳಿದ್ದಾರೆ.

ಮೇಘದೂತದಲ್ಲಿ ಎಲ್ಲವನ್ನೂ ಯಕ್ಷನೇ ಮಾತನಾಡುತ್ತಾನೆ, ಯಕ್ಷಿಯ ಮಾತುಗಳನ್ನು ಸ್ಥಿತಿಗತಿಗಳನ್ನು ಊಹಿಸಿ ನೋವನ್ನನುಭವಿಸುತ್ತಾನೆ. ಯಕ್ಷಿಯು ಸಹ ಮೌನಿ ಸಖೀಗೀತದ ಸಖಿಯಂತೆ. ಸಖ-ಸಖೀಯರ ಪ್ರೇಮ ಪರಿಪಾಕ ಮತ್ತು ಯಕ್ಷ-ಯಕ್ಷಿಯರ ಪ್ರೇಮ ಪರಿಪಾಕ ಒಂದೇ ಆಗಿದೆ. ಸಖೀಗೀತದಲ್ಲಿ ವರ ಮತ್ತು ಶಾಪಕ್ಕೆ ಸ್ಥಾನವೇ ಇಲ್ಲ. ಅಲ್ಲಿ, ಬರುವುದು ಸಖ ಮತ್ತು ಸಖಿ ಅನುಭವಿಸುವ ಅನೇಕ ಆತಂಕ ಮತ್ತು ಸಮಸ್ಯೆಗಳ ವಿವರವಾದ ವರ್ಣನೆಯಾಗಿದೆ.

ಬೇಂದ್ರೆಯವರ ಕಾವ್ಯಗಳು ಇತರ ಕಾವ್ಯಗಳಿಗಿಂತ ವಿಭಿನ್ನ ಎನಿಸಲು ಅವರ ಕಾವ್ಯಗಳಲ್ಲಿನ ಶಾರೀರಕತೆಯೇ ಕಾರಣವಾಗಿದೆ. ವಸ್ತು ಚೌಕಟ್ಟಿನಲ್ಲಿ ವಿಶಿಷ್ಟವಾದ ರಚನೆಯನ್ನು ಕಾಣುತ್ತೇವೆ.

ಆಗಲಿದ ಇನಿಯನ ಫಕ್ಕನೆ ನೋಡುತ
ಬಸಿರ ಹೂ ಕುಲುಕುಲು ನಕ್ಹಾಂಗ
ನಲ್ಲ ಮುಟ್ಟಿದ ಗಲ್ಲ, ನಲ್ಲೆಯ ಮೈಯೆಲ್ಲ
ಹಿಗ್ಗಿನ ಮುಳ್ಳಿಗೆ ಸಿಕ್ಹಾಂಗ

ಜುಮ್ ಜುಮು ರುಮು ಜುಮು ಗುಂಗುಣು ದುಮುದುಮು
ನಾದದ ನದಿಯೊಂದು ನಡೆಧಾಂಗ
ಗಲ್ಲ ಗಲ್ಲಕೆ ಹಚ್ಚಿ ನಲ್ಲ ನಲ್ಲೆಯರಿರುಳು
ಗುಜು ಗುಜು ಗುಲುಗುಲು ನುಡಿಧಾಂಗ

–ಸಖೀಗೀತ

ಈ ಕವನದ ಮುಖ್ಯ ಲಕ್ಷಣ ಅಭಿವ್ಯಕ್ತಿಯ ಸಾಮಗ್ರಿ, ಬಸಿರ ಹೂ ಹಿಗ್ಗಿನ ಮುಳ್ಳು ಮತ್ತು ಅನುಕರಣ ಶಬ್ದಗಳು ಅಭಿವ್ಯಕ್ತಿಯನ್ನು ತನಗೆ ಬೇಕಾದ ರೀತಿಯಲ್ಲಿ ಸಂಪೂರ್ಣವಾಗಿ ನಿಯಂತ್ರಿಸುತ್ತದೆ.

ಆತನೀತನವಂತ ಯಾತನದ ಯಾತನೆಯ
ಯಾವ ಕಿಗುಗುಟ್ಟೋದು ನಿಂದಾಂಗ
ನಾನೀನ ನುಡಿ ನುಂಗಿ ತಾನೀನ ತಾನೆ ತಾ
ತಾನಾಗಿ ತನನನ ಬಂಧಾಂಗ

ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು
ಹತ್ತಾಗಿ ಜತ್ತಾಗಿ ಸುಳಿಧಾಂಗ
ದಣಿದ ಜೀವದ ಮ್ಯಾಲೆ ಜೇನಿನ ಸುರಿಮಳೆ
ಜೇಂಗುಟ್ಟಿ ಹನಿಹನಿ ಇಳಿದಾಂಗ

–ಸಖೀಗೀತ

ಕಾಮ ಮತ್ತು ಅನುಭಾವ ಬೆಸೆಯುವ ರೀತಿಯನ್ನು ಇಲ್ಲಿ ಹೇಳಲಾಗಿದೆ. ಅನುಭವದ ಮುಖ್ಯ ಲಕ್ಷಣಗಳು ತಲ್ಲೀನತೆ ಮತ್ತು ಉನ್ಮತ್ತತೆ, ಬೇಂದ್ರೆ ಕಾವ್ಯದಲ್ಲಿ ವ್ಯಕ್ತಿ ತನ್ನ ಶಕ್ತಿಯನ್ನೆಲ್ಲಾ ಮೀರಿ ಉನ್ನತ್ತ ಸ್ಥಿತಿಗೇರುವುದನ್ನು ಕಾಣಬಹುದು. ಬೇಂದ್ರೆಯವರ ಸಾಕಷ್ಟು ಕಾವ್ಯಗಳು ಕಾಮವನ್ನೇ ಕೇಂದ್ರ ಬಿಂದುವಾಗಿ ಹಿಡಿದಿಟ್ಟಿದೆ. ಆದರೆ 'ಕಾಮ' ಕಾವ್ಯದಲ್ಲೇ ಸೀಮಿತವಾದ ಅರ್ಥದಲ್ಲಿ ತೋರುವುದಿಲ್ಲ. ಕಾಮ ಸುಪ್ರೇಮವಾಗಿ ಜಗತ್ತಿಗೆ ತನ್ನ ಕಂಪನ್ನು ಸೂಸುತ್ತದೆ.

ಆಷಾಡದ ಮುಗಿಲು ಬೀಸಾಡಿ ಬಂದವು
ಈ ಸಾಡಿ ಬಂದಂಥ ಆನೆಗಳೇ
ರೋಷದ ತೋಷದ ಬೆಡಗು ಬಿನ್ನಾಣದ
ಬೀರುವ ಬಿಂಕದಿ ಮೆರೆಯುವೊಲೆ

ಎಚ್ಚೆತ್ತ ಕಾಮಗೆ ಪಚ್ಚೆಯ ಪಸದನ
ಕಾಣಿಕೆಗೊಡುವಂತೆ ನೆಲವೆಲ್ಲವೆ
ಹಚ್ಚ ಹಸುರಾಯಿತ್ತೊ ಹುಚ್ಚು ಹಸಿರಾಯಿತ್ತೊ
ಹುಚ್ಚು ಹಿಡಿಸಿತು ನೋಡೆ ಲೋಚನಕೆ

ದಾಂಪತ್ಯ ಜೀವನದ ಸರಸ ಸಲ್ಲಾಪವನ್ನು ಹೇಳಲಾಗಿದೆ. ಬೆಡಗು, ಬಿನ್ನಾಣ, ಬಿಂಕ ಪದಗಳು ಸಾಮಾನ್ಯವಾಗಿ ಹೆಣ್ಣಿಗೆ ಹೇಳುವಂತ ಪದಗಳು. ಹೆಣ್ಣಿನ ಸೌಂದರ್ಯ ಈ ಪದಗಳಲ್ಲಿ ಅಡಗಿರುವುದು. 'ಎಚ್ಚೆತ್ತ ಕಾಮ' ನನ್ನು ಸಖ-ಸಖಿಯರ ಸರಸಗಳಿಗೆ ಹೋಲಿಸಲಾಗಿದೆ.

ಸರಸ, ವಿರಸ, ಸಮರಸಗಳನ್ನು ಬೇಂದ್ರೆಯವರ ಕಾವ್ಯಗಳಲ್ಲಿ ಕಾಣುತ್ತೇವೆ. ಕಾವ್ಯಗಳ ಒಟ್ಟಾರೆ ಆಶಯ ಅಥವಾ ಕವಿಯ ಆಶಯ ಪ್ರೇಮ ತತ್ವಗಳನ್ನು ಲೋಕಕ್ಕೆ ಸಾರುವುದಾಗಿದೆ. ಪ್ರೀತಿ, ಪ್ರೇಮವಾಗಿ ಪರಿವರ್ತನೆಯಾಗುವ ವಿಧಾನವನ್ನು ಅವರ ಕಾವ್ಯಗಳು ತೋರಿಸುತ್ತವೆ. ಬೇಂದ್ರೆಯವರು ಕಾವ್ಯಗಳನ್ನು ಹವ್ಯಾಸಕ್ಕಾಗಿ ಬರೆದವರಲ್ಲ. ಲೋಕಕ್ಕೆ ಸಂದೇಶ ನೀಡುವ ಸಂದೇಶ ವಾಹಕಗಳಾಗಿ ಬರೆದರು. 'ಕಾಮ'ದ ಬಗ್ಗೆ ಇರುವ ಸಂಕುಚಿತ ಭಾವನೆಯನ್ನು ಸರಿಸಿ ಸಂಕೀರ್ಣ ಭಾವನೆ ಮೂಡಿಸಲು ಪ್ರಯತ್ನಪಟ್ಟಿದ್ದಾರೆ. ಸಮಾಜದಲ್ಲಿ ಹೆಣ್ಣಿನ ಬಗ್ಗೆ ಇರುವ ಕೀಳು ಭಾವನೆಗಳನ್ನು ತೊಡೆದು ಹಾಕಿದ್ದಾರೆ. ಹೊಸ ಮಾರ್ಗದ ಹೊಸ ಆಶಯಗಳನ್ನು 'ಸಖೀಗೀತ' ಮತ್ತು 'ಮೇಘದೂತ' ಕಾವ್ಯದಲ್ಲಿ ತೋರಿಸಿದ್ದಾರೆ. ಹೆಣ್ಣಿಗೆ ತನ್ನ ಮನಸ್ಸಿನಲ್ಲಿ 'ಸಖಿ'ಯ ಸ್ಥಾನವನ್ನು ಕೊಡುವುದರ ಮೂಲಕ ಗತಕಾಲದಿಂದ ಬಂದ ದೃಷ್ಟಿಕೋನವನ್ನು ಬದಲಾಯಿಸಿದ್ದಾರೆ. ಸಮಾಜ ಅಥವಾ ಪತಿ ಹೆಣ್ಣನ್ನು ತನ್ನ ಜೀವನದ ಗೆಳತಿಯಾಗಿ ಸ್ವೀಕಾರ ಮಾಡಬೇಕೆಂದು ಹೇಳುತ್ತಾರೆ. ತೀರಾ ವೈಯಕ್ತಿಕವಾದ ಅನುಭವವನ್ನು ಕವಿ ರಹಸ್ಯವಾಗಿ ಹೇಳದೆ ಸಾಧಾರಣವಾಗಿಯೇ ಅಭಿವ್ಯಕ್ತಿಸಿದ್ದಾರೆ. ಒಲವಿಗಾಗಿ, ಬದುಕಿಗಾಗಿ ಸಂಗಾತಿಯನ್ನು ನಿರೀಕ್ಷಿಸುತ್ತಿದ್ದ ಕವಿಯ ಮನಸು ಇಲ್ಲಿ ವ್ಯಕ್ತವಾಗಿದೆ.

'ಒಲವಿಗೆ ಹುಡುಕಾಡಿ ಬಾಳಿಗೆ ಮಿಡುಕಾಡಿ
ಷಡ್ರಸ ನವರಸ ರುಚಿ ನೋಡಿದೆ.
ಕೂಸಿನ ಹೊಸತಾಯಿ ನಸುಮಾಯೆ ಬೀಸುತ
ನೀನು ನನ್ನೊಡನಿಂತು ಒಲೆ ಹೂಡಿದೆ
ಮೀಸಲು ಮುರಿಯದ ಒಲವಿಗೆ ಬಾಯ್ಬಿಡದೆ
ಕಣ್ಣೊಡ್ಡಿ ಹುದುವಿನ ಸವಿ ಬೇಡಿದೆ'
-ಸಖೀಗೀತ

ದಾಂಪತ್ಯದ ಪ್ರಣಯ ಉನ್ಮತ್ತಕ್ಕೇರಿ ಪ್ರೇಮ ಅರಳುವ ರೀತಿಯನ್ನು ಕವಿ ವ್ಯಕ್ತಪಡಿಸಿದ್ದಾರೆ. ತನು-ಮನ ಬೆರೆತಾಗ ಮಾತ್ರ ಬದುಕಿನ ಬಂಡಿ ಸುಖಮಯವಾಗಿ ಸಾಗಲು ಸಾಧ್ಯ. ತನು-ಮನಗಳು ಬೆರೆತು ಒಂದಾದ ಜೀವಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. ಕವಿಯು ತನ್ನ ಅನುಭವವನ್ನು ಹೇಳುವುದರ ಜೊತೆಗೆ ಆತ್ಮವಿಮರ್ಶೆಯನ್ನೂ ಮಾಡಿಕೊಂಡಿದ್ದಾರೆ.

'ನಿನ್ನೆಡೆ ಕರೆಯುವಿ ನೀ ನನ್ನ
ಮತ್ತೆನ್ನ ಕನ್ನಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗದು ಅಗಲಿಕೆ
ಮೌನದರಣ್ಯಕ್ಕೆ ನೀ ಬೆದರಿದೇ'

–ಸಖೀಗೀತ

ಕವಿ ಕನ್ನಡ ಕಾಯಕದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಸಂಸಾರಕ್ಕೆ ಕ್ಷಣಿಕ ಕಾಲ ದೂರವಾಗಿಯೇ ಇರುತ್ತಾರೆ. ಕವಿಯ ನಿರ್ಲಕ್ಷ್ಯೆ ಸಖಿಯ ಬದುಕು ನೀರಸವಾಗಿ ತೋರುವುದು ಇಬ್ಬರ ನಡುವೆ ಮೌನ ವ್ಯಾಖ್ಯಾನ ಮುಂದುವರೆಯುವುದು. ಕವಿ ಪತ್ನಿಯ ಮನಸ್ಸನ್ನು ನೋಯಿಸಿದ್ದರ ಬಗ್ಗೆ ಪಶ್ಚಾತ್ತಾಪ ಪಡುತ್ತಾ, ತನ್ನ ತಪ್ಪಿನ ಅರಿವು ಕವಿಯ ಆತ್ಮ ವಿಮರ್ಶೆಗೆ ಕಾರಣವಾಗಿದೆ. ಕವಿಯ ಸಾಧನೆಯನ್ನು ಕುರಿತು ಪತ್ನಿ ಹರ್ಷಗೊಂಡ ಸಂದರ್ಭವನ್ನು ನೆನೆಯುತ್ತಾರೆ. ಜೊತೆಗೆ ಅದರಿಂದ ತನ್ನ ಸಖಿಗಾದ ದುಃಖವನ್ನು ವ್ಯಕ್ತಪಡಿಸಿದ್ದಾರೆ.

'ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲೆನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಅನರೀತಿಯಂತೆಯೆ ನೆಲದ ಕಡೆ'.

–ಸಖೀಗೀತ

ಎಂದು ಹೇಳುತ್ತಿರುವ ಸಖಿಯೇ ಮುಂದುವರೆದು

'ಗೆಳೆಯರ ಕೂಡಾಡಿ ಬಂದಾಗ, ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೆ !
ಮನೆ ಬೆಳಕು ಮುಂದಿರೆ ಆ ಕಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀವರಿಯಿರೆ ?'

ತಪ್ಪನ್ನು ಅರಿತ ಕವಿ ಅದನ್ನು ನೇರವಾಗಿ ಸಖಿಯಲ್ಲಿ ಹೇಳಿಕೊಳ್ಳದೆ ಆಕೆಯ ಮನಸ್ಸಿನ ಇಂಗಿತವನ್ನು ಅರಿತು ಆತ್ಮ ವಿಮರ್ಶೆಗೆ ತೊಡಗಿದ್ದಾರೆ.

ಬೇಂದ್ರೆ ಕಾವ್ಯಗಳಲ್ಲಿ ಸಮರಸದ ತತ್ವವು ಮತ್ತೆ ಮತ್ತೆ ಪುನರಾವರ್ತನೆಯಾಗಿರುವುದನ್ನು ಕಾಣುತ್ತೇವೆ. ವಿರಸವೇ ನರಕ, ಸರಸವೇ ಸ್ವರ್ಗ, ಸಮರಸವೇ ಜೀವನ ಎಂಬುದನ್ನು ರಸವೇ ಜನನ, ವಿರಸ ಮರಣ, ಸಮರಸವೇ ಜೀವನ ಎಂದು ಹೇಳಿದ್ದಾರೆ. ಕಾವ್ಯದ ಅಂತಿಮ ಉದ್ದೇಶ ಸಮರಸದ ಜೀವನವೇ ಆಗಿದೆ. ಸಂಸಾರದಲ್ಲಿ ಕೋಪ-ತಾಪಗಳು ಉದ್ಭವಿಸುವುದು ಸಹಜ. ಇದು ಲೋಕ ರೂಢಿಯೂ ಹೌದು. ಆದರೆ ಮನಸ್ತಾಪಗಳನ್ನು ಮೀರಿ ಪ್ರೀತಿಯ ಅಮೃತವನ್ನು ಸೇವಿಸಬೇಕೆಂಬುದು ಕವಿಯ ಆಶಯವಾಗಿದೆ. ಬೇಂದ್ರೆಯವರ ಮಾನವ ಕೇಂದ್ರಿತ ಕಾವ್ಯಗಳ ಬಗ್ಗೆ ಕುರಿತು ಚನ್ನಣ್ಣ ವಾಲಿಕಾರರು ಈ ರೀತಿಯಾಗಿ ಹೇಳಿದ್ದಾರೆ. 'ಬೇಂದ್ರೆಯವರ ಮಾನವ ಕೇಂದ್ರಿತ ಕಾವ್ಯದಿಂದ ತಿಳಿದು ಬರುವ ಸಂಗತಿಗಳು ಮೂರು : ಸಾಹಿತ್ಯದ ಸತ್ವಗುಣ, ಜೀವನ ದರ್ಶನ, ಅನುಭಾವ ದರ್ಶನ, ಸಾಹಿತ್ಯ ಸತ್ವಗುಣ, ಜೀವನದರ್ಶನ ಬೇಂದ್ರೆಯವರ ಕಾವ್ಯದಲ್ಲಿ ಅಪಾರವಾಗಿ, ಪ್ರಾಮಾಣಿಕವಾಗಿ ಬಂದಿದೆ. ಆದರೆ ಅನುಭಾವ ದರ್ಶನ ಅಲ್ಲಲ್ಲಿ ಮಿಂಚಿದೆಯೆ ಹೊರತು ಘನೀಭೂತವಾಗಿ ಬಂದಿಲ್ಲ. 'ಶರಣರಂತೆ, ದಾಸರಂತೆ, ಅನುಭಾವಿ ಕವಿಗಳಂತೆ ಒಳ ಹೊರ ಒಂದಾಗಿ, ಹುಚ್ಚಾಗಿ ಬಂದಿಲ್ಲ. ಅದು ಅವರ ವೈಯಕ್ತಿಕ ನೆಲೆಯಲ್ಲಿ ಉಳಿದುಕೊಂಡಿದೆಯೇ ಹೊರತು ಲೋಕಹಿತದ ದೃಷ್ಟಿಯಿಂದ ಸಾರ್ವತ್ರಿಕ, ಸಾರ್ವಕಾಲಿಕವಾಗಿ ಬಂದಿಲ್ಲ' (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ 102) ಎಂದು ಅಭಿಪ್ರಾಯಪಡುತ್ತಾರೆ. ಇವರ ಪ್ರಕಾರ ಅನುಭಾವ ದರ್ಶನ ಅಲ್ಲಲ್ಲಿ ಸುಳಿದು ಬಂದರೂ ಮಿಂಚಿನಂತೆ ಪ್ರಕಾಶಮಾನವಾಗಿ ಹೊಳೆದು ತಕ್ಷಣ ಮಬ್ಬಾಗುವುದು. ಎಂದು ಹೇಳಿದ್ದಾರೆ. ಆದರೆ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಇವರ ಹೇಳಿಕೆಯನ್ನು ಅಲ್ಲಗಳೆಯುತ್ತದೆ. ಈ ಎರಡೂ ಕಾವ್ಯಗಳ ಸಂದೇಶ ಅಥವಾ ಅನುಭಾವ ದರ್ಶನ ಲೋಕ ಹಿತವೇ ಆಗಿದ್ದು ಸಾರ್ವಕಾಲಿಕವಾಗಿ ನಿಲ್ಲುವ ಕಾವ್ಯಗಳಾಗಿ ಮೂಡಿ ಬಂದಿದೆ.

ಬದುಕಿನ ಏರಿಳಿತಗಳಿಗೆ ಒಲವು ಜೀವನದ ಮೆಟ್ಟಿಲುಗಳಾಗಿ ಬಂದವು. ಒಲವಿನ ನಂಟು ವಿಭಿನ್ನ ಮಾದರಿಯಲ್ಲಿ ತನಗೆ ಆಸರೆಯಾಯಿತು ಎಂಬುದನ್ನು 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ' ಎಂದು ಹೇಳಿದ್ದಾರೆ. ಈ ಪದಗಳನ್ನು

ಕುರಿತು ದೊಡ್ಡರಂಗೇಗೌಡರು ಈ ರೀತಿ ಹೇಳಿದ್ದಾರೆ. 'ಪ್ರತೀಸಾರಿ ಪದ್ಯದ ಕೊನೆಗೆ ಇದು ಪುನರಾವರ್ತನೆ ಆದಾಗಲೂ ಬೇರೆ ಬೇರೆ ಅರ್ಥ ಪರಂಪರೆಯನ್ನೇ ಧ್ವನಿಸುವ ಸಾಧ್ಯತೆ ಈ ನೀಳ್ಗವಿತೆಗಿದೆ' ಎಂದು ಆ ಪದಗಳಲ್ಲಿ ಅಡಗಿರುವ ವಿಶಾಲಾರ್ಥವನ್ನು ವ್ಯಕ್ತ ಪಡಿಸಿದ್ದಾರೆ. ಬೇಂದ್ರೆಯವರು ಕೇವಲ ಪ್ರಣಯದ ಕವಿಯಲ್ಲ, ಮಾನವೀಯ ಕವಿ, ಆಧ್ಯಾತ್ಮದ ಕವಿ, ಅನುಭಾವದ ಕವಿ, ಸಾಮಾಜಿಕ ಕವಿ. ಆದ್ದರಿಂದ ಎಲ್ಲಾ ನೆಲೆಗಳಲ್ಲೂ ಅವರ ಪ್ರತಿಭೆ ಹರಡಿಕೊಂಡಿದೆ.

# ಅಧ್ಯಾಯ - ನಾಲ್ಕು

## ವಸ್ತು ವಿನ್ಯಾಸ ಮತ್ತು ಸೌಂದರ್ಯಾನುಭವ

### ವಸ್ತು ವಿನ್ಯಾಸ

ಕನ್ನಡ ಮೇಘದೂತದಲ್ಲಿ ಪೀಠಿಕೆ, ಪೂರ್ವ ಮೇಘ ಮತ್ತು ಉತ್ತರ ಮೇಘ ಇವುಗಳೊಂದಿಗೆ ಕೂಡಿಯೇ ಚರ್ಚೆ ಮಾಡಬೇಕಾಗುವುದು. ಬೇಂದ್ರೆಯವರ ಪೀಠಿಕೆ ಭಾಗವು ಕಾಳಿದಾಸನ ಪೂರ್ವ ಮೇಘ ಮತ್ತು ಉತ್ತರ ಮೇಘದೂತಕ್ಕೆ ಬರೆದ ಭಾಷ್ಯ, ವ್ಯಾಖ್ಯಾನವಾಗಿದೆ.

ಕಾಮದಲ್ಲಿ ಮೂರು ಹಂತ

1. ಅನಾದಿ ಕಾಮ
2. ಜೀವನಲೋಕದ ಕಾಮ
3. ಭೂಮಿಯ ಕಾಮ

ಈ ಕಾರಣದಿಂದ ಪುರುಷ (ಆಕಾಶ) - ಪ್ರಕೃತಿ (ಭೂಮಿ) ದೇವ-ಅಸುರ-ಪುರಾಣ, ಪಶು-ಪಕ್ಷಿ, ಕ್ರಿಮಿ-ಕೀಟಗಳ ನೆಲೆಯಲ್ಲಿಯೂ ಕಾಮವಿರುತ್ತದೆ. ಆ ನೆಲೆಯಲ್ಲಿಯೂ ನಾವು ವಿಚಾರಮಾಡಬೇಕಾಗುವುದು.

ಮೇಘದೂತದಲ್ಲಿ ಕಾಯಿಯಾಗಿರುವ ಯಕ್ಷ ವಿರಹದಿಂದ ಕವಿಯಾಗುವನು. ಕಾಮದ ತೃಷೆಯಿಂದ ಉರಿದು ಉಜ್ವಲ ಪ್ರಕಾಶವಾಗುವ ಪ್ರೇಮದ ಅಭಿವ್ಯಕ್ತಿ ಅಲ್ಲಿದೆ. ಅನ್ನ ಪ್ರಾಣಗಳ ಪ್ರಪಂಚವನ್ನು ದಾಟಿದ ಜೀವಕ್ಕೆ ಹೃದಯ ಹೊಂದಿದ್ದು, ಆ ಹೃದಯಕ್ಕೆ ಇಚ್ಛೆ, ಇಚ್ಛೆಯಿಂದ ಪ್ರೇರಣೆ, ಪ್ರೇರಣೆಯಿಂದ ಸಂಗ; ಸಂಗವು ಸ್ಥಿರವಾಗಿ ರತಿ, ರತಿಯಿಂದ ಕಾಮ, ಕಾಮವು ಪಕ್ವಗೊಂಡು ಪ್ರೇಮ, ಪ್ರೇಮವು ಕರುವಿಟ್ಟ ಮಗ್ಗು; ಮಗುವಿನಲ್ಲಿ ಮತ್ತೆ ಹೃದಯದ ಆವಿರ್ಭಾವ. ಈ ಚಕ್ರವು ಅನಾದಿ ಮತ್ತು ಅನಂತ. ಜಗತ್ತಿನಲ್ಲಿ ತಂದೆ-ತಾಯಿಗಳಾದ ಶಕ್ತಿ-ಶಿವರು ಕಂದನಾದ ಸ್ಕಂದನೊಡನೆ ಅಖಂಡ ಮಿಥುನ ಲೀಲೆಯಲ್ಲಿ ತೊಡಗಿರುವಾಗ ಉಂಟಾಗುವ ಆನಂದವೇ ಜೀವಲೋಕದಲ್ಲಿ ರಸವಾಗಿ ಇಳಿಯುತ್ತದೆ.

ಅನಾದಿ ಕಾಮ ಕ್ರಮ - ಕಾಮ ಎಂಬುದನ್ನು ಬೇಂದ್ರೆಯವರು ಒಂದು ಭಾವವಾಗಿ ಮತ್ತು ತತ್ವವಾಗಿ ಅರ್ಥೈಸಿಕೊಂಡಿದ್ದಾರೆ. ಈ ತತ್ವವು ದೇವಲೋಕದಿಂದ

ಜೀವಲೋಕದವರೆಗೂ ಹಬ್ಬಿದೆ. 'ಕಾಮ' ಶಬ್ಧದ ಅರ್ಥವನ್ನು ಅಂಬಿಕಾತನಯದತ್ತರು 'ಬ್ರಹ್ಮ ಹೃದಯದಲ್ಲಿ ಜನಿಸಿದ ಇಚ್ಛೆ' ಎಂದು ಹೇಳಿದ್ದಾರೆ. ಆದ್ದರಿಂದ ಇದು ಅನಾದಿ ಕಾಮ ಶಿವ-ಶಕ್ತಿಯನ್ನು ಕೂಡಿಸುವಲ್ಲಿ, ದಹನವಾದ ಕಾಮ ಅನಂಗನಾಗಿ ಕೃಷ್ಣ-ರುಕ್ಮಿಣಿಯರ ಪುತ್ರ ಪ್ರದ್ಯುಮ್ನನಾಗಿ ಹುಟ್ಟುತ್ತಾನೆ. ಅಗಲಿಸುವ ಮತ್ತು ಕೂಡಿಸುವ ತತ್ವ ಒಂದೇ ಆಗಿದೆ.

ಜೀವಲೋಕದ ಕಾಮ ಪ್ರಕಾರಗಳಲ್ಲಿ ಮೂರು ಎಂದಿದ್ದಾರೆ ಅಂಬಿಕಾತನಯದತ್ತರು. 'ಮಗು ಎಂಬುದು ಕಾಮದೇವ, ಕಾಮಿಗಳೆನಿಸಿರುವ ತಂದೆ-ತಾಯಿಗಳಲ್ಲಿ ಮಗನ ಬಗ್ಗೆ ಮೋಹ ಇರುತ್ತದೆ. ಊಹೆಯ ಸುಳಿಗೆ ಸಾಗುವುದು ಕವಿಯ ಕಾಮವಾಗಿರುವಂತೆ ಯೋಗ ಮಾರ್ಗಾವಲಂಬಿಯಾಗಿರುವುದು ಭಕ್ತನ ಕಾಯ. ಹೀಗೆ ವ್ಯಕ್ತವಾಗಿರುವ ಮೋಹ, ಊಹೆ ಮತ್ತು ಭಕ್ತಿಯೋಗ ಇವು ಸ್ವಾಭಾವಿಕ ಕ್ರಿಯೆಗಳಾಗಿದ್ದು ಪ್ರೇಮದ ಮೂರು ಪ್ರಕಾರಗಳಾಗಿವೆ'.

ಭೂಮಿಯ ಕಾಮ :- ಮಣ್ಣು, ಹೆಣ್ಣು, ಪೃಥ್ವಿ ಮೋಡದಿಂದ ಅಗಲಿ ವಿರಹ ವೇದನೆಯಿಂದ ತಿರುಗುತ್ತಿದ್ದಾಳೆ. ಅವಳು ಬಳಲಿ ದುಃಖಪಟ್ಟು ಸುರಿಸಿದ ಕಣ್ಣೀರೆ, ಉಗಿಯಾಗಿ, ಮೋಡವಾಗಿ ಬಾನೊಡೆಯನನ್ನು ಕೂಡುತ್ತಾಳೆ. ಆ ಕೂಡುವಿಕೆಯ ಪರಿಣಾಮವಾಗಿ ಸುರಿಯುವುದೇ ಮಳೆ ಇದು ಭೂಮಿಯ ಕಾಮವಾಗಿದೆ. ಇದಿಷ್ಟು ಪೀಠಿಕಾ ಭಾಗದಲ್ಲಿ ಮುಖ್ಯವಾಗಿ ಬೇಂದ್ರೆಯವರು ಕಾಮದ ಬಗ್ಗೆ ನೀಡಿರುವಂತ ಸಂಕ್ಷಿಪ್ತವಾದ ವಿವರವಾಗಿದೆ. ಮುಂದೆ ಪೂರ್ವ ಮೇಘ ಮತ್ತು ಉತ್ತರ ಮೇಘವೆಂದು ವಿಭಾಗ ಮಾಡಿಕೊಂಡಿದ್ದು, ಒಟ್ಟು 115 ಶ್ಲೋಕಗಳಿವೆ. ಪೂರ್ವ ಮೇಘ 63 ಉತ್ತರ ಮೇಘ 52.

ಕಥೆಯ ಹಂದರ ಶುರುವಾಗುವುದು ಕುಬೇರನ ಶಾಪದೊಂದಿಗೆ. ಯಕ್ಷ ಯಕ್ಷಿಯ ಮದುವೆಯಾದ ನಂತರ ಕುಬೇರನ ಶಾಪದಿಂದ ಅಗಲಿರಬೇಕಾಗುವುದು. ಆಷಾಢ ಮಾಸದ ಒಂದು ದಿನ ಯಕ್ಷನಿಗೆ ಯಕ್ಷಿಯ ನೆನಪಾಗಿ ಮೇಘವನ್ನು ಸಂದೇಹವಾಹಕನಾಗಿ ಅಲಕಾವತಿಗೆ ಕಳುಹಿಸುತ್ತಾನೆ. ತನ್ನಾಕೆಯ ಕುಶಲವಾರ್ತೆಯನ್ನು ತಿಳಿಸಲು ಬಿನ್ನೈಸಿಕೊಳ್ಳುತ್ತಾನೆ. ಇಲ್ಲಿ ಮೋಡದೊಂದಿಗೆ ಯಕ್ಷ ನಡೆಸುವ ಸಂದೇಶ ಇಡೀ ಕಾವ್ಯವನ್ನು ಆವರಿಸಿದೆ.

'ಸಖೀಗೀತ' ಖಂಡ ಕಾವ್ಯವು ಇಪ್ಪತ್ತನಾಲ್ಕು ಸಾಲಿಗೆ ಒಂದು ವಿಷಯ ಮುಗಿಯುತ್ತದೆ. ಹೀಗೆ ನಲವತ್ತು ಭಾಗಗಳಲ್ಲಿ ಈ ಕವನ ಹಬ್ಬಿದೆ. ಈ ಕವನದ ನಾಯಕ, ಕವಿ ಮತ್ತು ಪತ್ನಿ ಇವರಿಬ್ಬರ ಶೃಂಗಾರದ ನಾಟಕದ ನಾಯಕ ನಾಯಿಕೆಯರಲ್ಲಿ ಸಾಂಸಾರೀಕ ಜೀವನದ ಸಾಮಾನ್ಯ ದಂಪತಿಗಳು ಅಗ್ನಿ ಸಾಕ್ಷಿಯಾಗಿ ಬಂದ ಕನ್ಯೆಯನ್ನು ನಾಯಿಕೆಯಾಗಿ

ಸ್ವೀಕರಿಸಿ, ನಾಯಕನಾದ ಕವಿಯು ತನ್ನ ಜೀವನದ ನಾಟಕವನ್ನು ಪ್ರಾರಂಭಿಸುತ್ತಾನೆ. ಇಲ್ಲಿಯ ನಾಯಕ ಸಂಸ್ಕೃತ, ಇಂಗ್ಲೀಷ್, ಕನ್ನಡ ಕಾವ್ಯಗಳನ್ನೋದಿ ಪದವಿ ಪಡೆದ ಸುಸಂಸ್ಕೃತ, ನಾಯಕಿ ಭಾರತೀಯ ಪರಂಪರೆಯಲ್ಲಿ ಬೆಳೆದ, ಪತಿಯನ್ನೇ ದೈವವೆಂದು ಭಾವಿಸುವ ಮುಗ್ಧೆ. ಇವರ ದಾಂಪತ್ಯ ಜೀವನದಲ್ಲಿ ಸಂತತಿ ಆಗುವಿಕೆ-ಹೋಗುವಿಕೆ, ಆರೋಗ್ಯ, ಅನಾರೋಗ್ಯ ನಾಯಕನ ಜೀವನ ವೃತ್ತಿಯಲ್ಲಿ ಆಗುವ ಅನೇಕ ಬದಲಾವಣೆಗಳು ಸಂಭವಿಸುವ ಘಟನೆಗಳಿಂದ ಸಂಸಾರದಲ್ಲಿ ಏರಿಳಿತಗಳು ಉಂಟಾಗುವುವು. ಪತಿಯೊಡನೆ ಪತ್ನಿಯು ಪ್ರೇಮದಿಂದ ನಡೆಯಲು ಕಲಿಯಬೇಕು ಹಾಗೆಯೇ ಪತ್ನಿಯನ್ನು ಪತಿ ದಾಸಿ ಎಂದು ಭಾವಿಸದೇ ಸಖಿ ಎಂದು ತಿಳಿದಾಗ ಪ್ರೇಮ, ಸ್ನೇಹ ಉದಯವಾಗುವುದು ಎಂಬುದನ್ನು ಇಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಕವಿಯು ತನ್ನ ಸಖಿಯನ್ನು ಅಗಲಿದ ಕ್ಷಣಗಳು ಪ್ರಣಯ ಗೀತೆಗಳಾಗಿ ಹೊರ ಹೊಮ್ಮಿದೆ. ಇಲ್ಲಿ ಕವಿಯು ತನ್ನ ವೈಯಕ್ತಿಕ ಆತ್ಮ ವೃತ್ತಾಂತಗಳನ್ನು ಹೇಳಿಕೊಂಡಿದ್ದರೂ ಇದು ಹಿಡೀ ಸಮಾಜದ ದಾಂಪತ್ಯ ಜೀವನದ ಸ್ಥೂಲ ನಕ್ಷೆಯನ್ನು ಮುಂದಿಡುವಂತಿದೆ.

'ಸಖೀಗೀತ' ಮತ್ತು ಮೇಘದೂತ ಕಾವ್ಯಗಳ ವಸ್ತು ಒಂದೇ ಆಗಿದ್ದು ಅದರ ಆಕೃತಿಗಳು ರೂಪು ರೇಷೆಗಳಲ್ಲಿ ವಿಸ್ತರಿಸಿಕೊಂಡರೂ, ಎರಡೂ ಕಾವ್ಯಗಳು ನೀಡುತ್ತಿರುವ ಸಂದೇಶ ಒಂದೇ ಆಗಿದೆ. ಎರಡೂ ಕಾವ್ಯಗಳಲ್ಲಿನ ವಿರಹಾವಸ್ಥೆಯು ಕಾದು, ಬೆಂದ, ಸುಪ್ರೇಮವೇ ಆಗಿದೆ. ಈ ಕಾವ್ಯಗಳಲ್ಲಿನ ಸಖ-ಸಖಿಯರ ಪ್ರೇಮವು ಸಮಾಜದ ಚೌಕಟ್ಟಿನಲ್ಲಿಯೇ ಹುಟ್ಟಿ ಅರಳಿದ ಪ್ರಣಯ ಗೀತೆಗಳಾಗಿವೆ. ಸಂದರ್ಭ ಸನ್ನಿವೇಶಗಳು ಒಂದನ್ನೊಂದು ಹೋಲುವಂತೇ ಆಗಿದೆ.

ಬೇಂದ್ರೆಯವರು ತಮ್ಮ ಕಾವ್ಯಗಳಲ್ಲಿ ಅನುಭವದ ಸಂಕೀರ್ಣ ವಿನ್ಯಾಸವನ್ನೇ ಕಾವ್ಯದ ವಿನ್ಯಾಸವಾಗಿ ಬಳಸಿಕೊಂಡಿದ್ದಾರೆ. ನಮ್ಮ ವಾಸ್ತವ ಜಗತ್ತಿನಲ್ಲಿ ತುಂಬ ಸಾಮಾನ್ಯವಾಗಿ ನೀರಸವಾಗಿ ಕಂಡದ್ದು ಬೇಂದ್ರೆಯವರ ಜಗತ್ತಿನಲ್ಲಿ ಹೊಸದಾಗಿ ಆಕರ್ಷಣೀಯವಾಗಿ ಕಾಣುತ್ತದೆ. ಇವರು ಪ್ರಕೃತಿಯನ್ನು ಬಳಸಿಕೊಂಡಿರುವ ರೀತಿಯೇ ಆಗಿದೆ. ಪತ್ನಿ ಸಖಿಯಾಗುವುದು ಅಷ್ಟು ಸುಲಭವಲ್ಲ ಕ್ಲಿಷ್ಟಕರವಾದದ್ದು ಅನೇಕ ಕಷ್ಟ-ನಷ್ಟಗಳನ್ನು ಅನುಭವಿಸಿ ತಾಳ್ಮೆಯಿಂದ ಎಲ್ಲವನ್ನೂ ಸಹಿಸಿ ಜೀವನವನ್ನು ಗೆಲ್ಲುವುದೇ ಸಖೀಗೀತದ ವಸ್ತು ವಿನ್ಯಾಸ.

'ಪತ್ನಿ ಸಖಿಯಾಗುವ ಈ ಕ್ರಿಯೆ ಅಷ್ಟು ಸುಲಭವಲ್ಲ. ಅನೇಕ ಅಗ್ನಿ ದಿವ್ಯಗಳನ್ನು ದಾಟಬೇಕು. ಅನೇಕ ಚಂಡ ಮಾರುತಗಳನ್ನು ಎದುರಿಸಿ ಇಬ್ಬರು ಮಾಗಬೇಕು. ಈ

ಮಾಗುವಿಕೆಯ ಕ್ರಮವೇ 'ಸಖೀಗೀತ'ದ ವಸ್ತು ವಿನ್ಯಾಸದ ಹಿಂದಿರುವ ತರ್ಕ' ಎಂದು ಡಿ.ಆರ್. ನಾಗರಾಜ್ ಅಭಿಪ್ರಾಯ ಪಡುತ್ತಾರೆ (ಶಕ್ತಿ ಶಾರದೆಯ ಮೇಳದ ಪುಟ 237). 'ಬೇಂದ್ರೆ 'ಆಕಾಶದ ಕವಿ'ಯಲ್ಲ ನೆಲದ ಕವಿ, ಮಣ್ಣಿನ, ಸೌಂದರ್ಯದ ಕಣ್ಣಿನ ಕವಿ' ಎಂದು ಡಾ. ಎಸ್. ಎಂ. ವೃಷಬೇಂದ್ರ ಸ್ವಾಮಿಯವರು ಬೇಂದ್ರೆಯವರ ಕವಿತ್ವದ ಬಗ್ಗೆ ಹೇಳಿದ್ದಾರೆ (ಬೇಂದ್ರೆ ಸಾಹಿತ್ಯ ಸಮಾಲೋಚನೆ ಪುಟ 139)

**ಸೌಂದರ್ಯಾನುಭವ :**

ಹೆಣ್ಣಿಗೆ ಸೌಂದರ್ಯ ಎಷ್ಟು ಮುಖ್ಯವೋ ಕಾವ್ಯಕ್ಕೆ ಸೌಂದರ್ಯ ಎಂಬುದು ಅಷ್ಟೇ ಮುಖ್ಯ. ಕಾವ್ಯದ ಸೌಂದರ್ಯ ಅಡಗಿರುವುದು ಕವಿ ಬಳಸುವ ಲಾಲಿತ್ಯದ ಭಾಷೆಯಲ್ಲಿ ವರ್ಣನೆ ಮತ್ತು ಸಮಯೋಚಿತ ಸನ್ನಿವೇಶಗಳಲ್ಲಿ ಬೇಂದ್ರೆಯವರ ಕಾವ್ಯಗಳ ಸೌಂದರ್ಯ ಪ್ರತಿಯೊಬ್ಬ ರಸಿಕನಿಗೂ ಅನುಭವವಾಗದೆ ಇರದು. ಅವರ ಸುಲಲಿತವಾದ ಲಯ, ಶೃತಿ, ಧ್ವನಿ, ರಸಾವಳಿಗಳು ಎಲ್ಲರ ಮನಸ್ಸಿಗೆ ಮುದ ನೀಡುವಂತದ್ದೇ. ವಾಸ್ತವ ಜೀವನದ ಕಲ್ಪನಾ ವಿಲಾಸದಲ್ಲಿ ತೇಲಿಸುವ ಅವರ ಕಾವ್ಯಗಳು ವೈಯಕ್ತಿಕ ಜೀವನದ ಅನುಭವವನ್ನು ಉಂಟು ಮಾಡುತ್ತವೆ.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಪ್ರಾರಂಭದಿಂದ ಕೊನೆಯವರೆಗೂ ಸೌಂದರ್ಯದ ನಿಧಿಯನ್ನು ಹೊತ್ತು ಸಾಗಿ ಸೌಂದರ್ಯದಿಂದಲೇ ಕೊನೆಯಾಗುವಂತದ್ದು. ಬೇಂದ್ರೆಯವರ ಕಾವ್ಯ ಸೌಂದರ್ಯ ಅಡಗಿರುವುದು ಅವರು ಕಣ್ಣಿಗೆ ಕಟ್ಟಿಕೊಡುವ ಪ್ರಕೃತಿ ವರ್ಣನೆಯಲ್ಲಿ ಪಂಪ, ರನ್ನ, ಕುಮಾರವ್ಯಾಸರಿಂದ ಹಿಡಿದು ನವೋದಯ ಕವಿಗಳ ವರೆಗೂ ಪ್ರಕೃತಿಯನ್ನು ವಿಶೇಷವಾಗಿ ಕಾವ್ಯಗಳಲ್ಲಿ ವರ್ಣಿಸಲಾಗುವುದು. ಬೇಂದ್ರೆಯವರ ಜೀವನವೇ ಒಂದು ಸೌಂದರ್ಯಾನುಭವ ಎಂದು ಹೇಳಬಹುದು. ವೈಯಕ್ತಿಕ ಸಾಂಸಾರಿಕ ಜೀವನವನ್ನು ಕಾವ್ಯವನ್ನಾಗಿ ಮಾಡಿರುವ ಅವರ ಕಲೆಗಾರಿಕೆ, ಸೌಂದರ್ಯ ಪ್ರಜ್ಞೆ ಎಲ್ಲ ರೀತಿಯಿಂದಲೂ ಮೀರಿ ನಿಲ್ಲುವಂತದ್ದು 'ಕಾಮ' ಎನ್ನುವ ಶೃಂಗಾರ ರಸವನ್ನು ಸುಪ್ರೇಮವಾಗಿ ತಂದು ನಿಲ್ಲಿಸಿರುವ ಅವರ ಪ್ರತಿಭೆಯು ಸೌಂದರ್ಯದ ಒಂದು ಭಾಗವೇ ಆಗಿದೆ. ಪ್ರಕೃತಿಯಲ್ಲಿ ಸಹಜ ಎನಿಸುವಂತಹ ಪ್ರತಿಯೊಂದು ವಸ್ತುವನ್ನು ಬೇಂದ್ರೆಯವರು ವಿಶೇಷವಾಗಿ ವರ್ಣಿಸಿದ್ದಾರೆ. ಅವರ ವರ್ಣನೆಯಲ್ಲಿನ ಪ್ರತಿಯೊಂದು ವಸ್ತುವು ಕಾವ್ಯ ಸೌಂದರ್ಯಕ್ಕೆ ಪ್ರೇರಣೆಯೇ ಆಗಿದೆ.

ಯಥೇಚ್ಛವಾಗಿ ಬಳಸುವ ರೂಪಕ ಪ್ರತಿಮೆಗಳು ಕಾವ್ಯ ಸೌಂದರ್ಯವನ್ನು ಹೆಚ್ಚಿಸಿದೆ. 'ಮೇಘದೂತ' ಮತ್ತು 'ಸಖೀಗೀತ'ದ ರಸ ಸೃಷ್ಟಿಯು ವಿಶೇಷವಾಗಿರುವುದು. ಮೇಘದೂತದಲ್ಲಿನ ಮೇಘವನ್ನು ಸಂದೇಹವಾಹಕವಾಗಿ ಬಳಸಿಕೊಂಡಿರುವ ರೀತಿಯೇ ಕಾವ್ಯಕ್ಕೆ ಹೊಳಪನ್ನು ನೀಡುವಂತದ್ದು ಕಾಳಿದಾಸನ ಕಲಾಪ್ರತಿಭೆಯನ್ನು ಮೀರಿ ಮೇಘ ಸಂದೇಶವನ್ನು ಕಳುಹಿಸಿರುವ ಬೇಂದ್ರೆಯವರ ಕಾವ್ಯಗಾರಿಕೆ ಕಾಳಿದಾಸ ಕವಿಯಷ್ಟೆ ಸತ್ವವುಳ್ಳಂತದ್ದು. ಸಾಮಾನ್ಯವಾದ ವಿರಹಿಯೊಬ್ಬನ ವಿರಹ ವೇದನೆಯನ್ನು ಕಾವ್ಯರಸವನ್ನಾಗಿ ಪರಿವರ್ತಿಸಿರುವುದರಲ್ಲಿಯೇ ಮೇಘದೂತದ ಸೌಂದರ್ಯ ಅಡಗಿದೆ.

ಕವಿಯ ಭಾವನೆಗಳಿಗೆ ಪೂರಕವಾಗಿ ನಿಲ್ಲುವ ಪ್ರಕೃತಿ ವರ್ಣನೆಗಳು ಕಾವ್ಯವನ್ನು ಸೌಂದರ್ಯ ಸಾಗರದಲ್ಲಿ ಮುಳುಗಿಸುವುದು. ಯಕ್ಷ-ಯಕ್ಷಿ ವಾಸವಾಗಿದ್ದ ಸ್ಥಳ. ಅಲಕಾವತಿ ಶೃಂಗಾರದ ಪ್ರತೀಕವಾದ ಸ್ಥಳ. ಅಲಕಾವತಿ ಶೃಂಗಾರದ ಪ್ರತೀಕವಾದ ಸ್ಥಳ. ಸುತ್ತಲೂ ಚೆಲುವಿನ ರಂಗವಲ್ಲಿಯನ್ನು ಹರಡಿರುವಂತ ವೀಡು. ಎಲ್ಲಿ ನೋಡಿದರೂ ಉದ್ದಕ್ಕೂ ಮಂದಾರದ ಛಾಯೆಯಿಂದ ಒಳಗೊಂಡ ನಂದನವನಗಳು, ತೊಂಡೆ ತುಟಿಯ ಮರುಳೆಯರು, ವಿರಕ್ತ ಕಂಠ ಕಿನ್ನರರೂ ಶೃಂಗಾರ ಮೂರ್ತಿಗಳಂತೆ ಕಾಣುವರು. ಅಲಕಾವತಿಯಲ್ಲಿರುವ ಪ್ರತಿಯೊಬ್ಬರು ಪ್ರೀತಿಗೆ ಮಣಿದಿರುವವರೇ ಆಗಿದ್ದು ಅಲ್ಲಿ ಚೆಲ್ಲಿರುವ ಗಾಳಿ, ಬೆಳಕು, ನೀರು ಎಲ್ಲವೂ ಪ್ರೀತಿಯ ಸಂಕೇತವೇ ಆಗಿದೆ.

ಬೇಂದ್ರೆಯವರ ಪ್ರಪಂಚದಲ್ಲಿ ಪ್ರೀತಿಯೊಂದಿಗೆ ಪ್ರಕೃತಿಯು ಲೀನವಾಗಿದೆ. 'ಸಖೀಗೀತ' ಮತ್ತು 'ಮೇಘದೂತ'ದಲ್ಲಿ ಋತುಮಾನಗಳ ವರ್ಣನೆಯೊಂದಿಗೆ ಚಮತ್ಕಾರಗಳು ಸೇರಿಕೊಂಡಿವೆ. ಸಖೀಗೀತದ 389ನೇ ಸಾಲಿನಿಂದ 432 ರ ವರೆಗಿನ ಸಾಲುಗಳ ಋತುಮಾನದ ವರ್ಣನೆ ಇದೆ. ಬೇಸಿಗೆಯನ್ನು ಬೇಸಿಗೆಯಟ್ಟಲು ಬೀಸಣಿಗೆ ಬೀಸಾಡಿ! ಮರುಳಾವದು ಜನ ತೊಳಲುತಿರೆ ಎಂದು ಆಷಾಡವನ್ನು ಆಷಾಡ ಮುಗಿಲು ಬೀಸಾಡಿ ಬಂದವು ಎಂದು! ಈಸಾಡಿ ಬಂದಂಥ ಆನೆಗಳೇ ಎಂದು ಶ್ರಾವಣವನ್ನು ತಿರುಳೆತ್ತಿ ಹುರುಳೆತ್ತಿ ತೆನೆತೆನೆ ತೋರುತಿದೆ, ಬೆಂಡಿಗು ಸವಿಯಿತ್ತು ನೆಲಹೊಲವು' ಎಂದು; ಚಳಿಗಾಲವನ್ನು 'ಕಾಲ್ಬಿದ್ದು ಕೈ ಹಿಡಿದು ಮುತ್ತಿಟ್ಟು ಮುಗಿಬಿದ್ದು! ಮೈ ಏರಿ ಮೈ ಹೊಕ್ಕು ಮಾಗಿಬರೆ ಎಂದು ಮನಸ್ಸಿಂದ ಬಣ್ಣಿಸಿದ್ದಾರೆ.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ಅಗಲಿಕೆಯ ವಿಪ್ರಲಂಭ ಶೃಂಗಾರವು ಕಾವ್ಯದ ಒಡಲಲ್ಲಿ ಒಲವಿನ ಕಿಚ್ಚಾಗಿ ಹಲವು ಭಾವಲಹರಿಯಾಗಿ

ಹರಿಯುವುದನ್ನು ಅನೇಕ ರೂಪಕ ಪ್ರತಿಮೆಗಳೊಂದಿಗೆ ಹಿಡಿದಿಟ್ಟಿದ್ದಾರೆ. ಇಲ್ಲಿನ ಭಾವಲಹರಿ ರಸಭೋಗಕ್ಕಿಂತ ರಸೈಕ್ಯದಾಸೆಯೇ ಆಗಿದೆ. ಬೇಂದ್ರೆಯವರ ಪ್ರತಿಯೊಂದು ಹಾಡಿನಲ್ಲಿಯೂ ಸೌಂದರ್ಯದ ನಿಧಿಯೇ ಅಡಗಿದೆ. 'ಸಖೀಗೀತ'ದಲ್ಲಿ 'ವಿಧಿ ತಂದ ವಧು'ವನ್ನು ಸ್ನೇಹಿತೆಯಾಗಿ ಭಾವಿಸಿಕೊಂಡು ಕಾವ್ಯವಾಗಿ ಚಿತ್ರಿಸಿರುವುದು ಸೌಂದರ್ಯ ಪ್ರಜ್ಞೆಯಿಂದಲೇ ವಿವಾಹ ಸಂದರ್ಭದಲ್ಲಿ ಅಂತಃ ಪಟದಾಚೆ ನಿಂತಿರುವ ವಧುವನ್ನು ಕಾಣುವುದು, ಮಧುರವಾದ ಭಾವನೆಗಳಿಂದ ಸವಿಯುವುದು ಪ್ರಕೃತಿ ಸಹಜವಾಗಿ ಬೆವರಿನ ಬಾಸಿಂಗ ಕಟ್ಟಿಕೊಂಡ ಬೆವರಿನ ಹನಿಯೊಂದನ್ನು ಮೂಗುಬಟ್ಟಾಗಿ ಧರಿಸಿದ ಸೌಂದರ್ಯದಲ್ಲಿ.

ಮುತ್ತಿಗು ಮಿಗಿಲಾಗಿ ಹೂವಿಗೂ ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತರು ನಾಚಿಸಿ ಬೆವರಿನ ಹನಿಯೊಂದು
ಮೂಗು ಬಟ್ಟಿನ ಅಂದ ಮಿನುಗುತಿರೆ !

ತನ್ನ ಪ್ರಿಯ ಸಖಿಯು ಭೌತಿಕ ಒಡವೆಗಳಿಗಿಂತ ನಿಸರ್ಗ ಸಹಜ ಸೌಂದರ್ಯದಲ್ಲಿ ಶೃಂಗಾರಗೊಂಡಿರುವುದನ್ನು ಬಣ್ಣಿಸಿದ್ದಾರೆ.

ಬಳ್ಳಿಯಲಿ ಆ ಬಳಕು ಮೈಯ್ಯು ಹುಲ್ಲೆಯ ಬೆದರುಗಣ್ಣು ಮುಖದ ಛಾಯೆ ಚಂದ್ರನಲಿ ಗರಿಗಳಲಿ ಹೆಳಲ ಭಾರವನ್ನು ನದಿಯ ಹರಿತದಲಿ ಹುಬ್ಬು ಮುರಿತವನು ಕಾಣಬೇಕು ಎಂದೆ ಇಷ್ಟು ಕೂಡ ಸಾದೃಶ್ಯ ಕಾಣದೆ, ಚಂಡಿ, ನೊಂದೆ, ಬೆಂದೆ. ಪ್ರೇಮಿಯ ಮನಸ್ಸು ವಿರಹ ವೇದನೆಯಲ್ಲಿ ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲಿಯೂ ತನ್ನ ಪ್ರೇಯಸಿಯ ಬಳಕುವಂತ ಮೈ ಸಿರಿ, ಜಂಕೆಯ ಕಣ್ಣುಗಳಲ್ಲಿ ಅವಳ ಬೆದರುಗಣ್ಣು, ಆಕಾಶದಲ್ಲಿ ಕಾಣುವ ಚಂದ್ರನಲ್ಲಿ ಅವಳ ಮುಖಾರವಿಂದ, ಗಿಡ-ಗಿರಿಗಳಲ್ಲಿ ಅವಳ ನೀಳಕೂದಲಿನ ಜಡೆ, ಹರಿಯುವ ನದಿಯಲ್ಲಿ ಅವಳ ಕಣ್ಣು ಹುಬ್ಬುಗಳ ಸೌಂದರ್ಯವನ್ನು ಚಂದ್ರನಲ್ಲಿ ಅವಳ ಮುಖದ ಮುದ್ರೆಯನು, ಗಿಡ-ಗರಿಗಳಲ್ಲಿ ಅವಳ ನೀಳ ಕೂದಲಿನ ಜಡೆಯನ್ನು, ಹರಿಯುವ ನದಿಯಲ್ಲಿ ಅವಳ ಕಣ್ಣು ಹುಬ್ಬುಗಳ ಒಯ್ಯಾರವನ್ನು ಕಾಣುವ ಪ್ರೇಮ ಅವಳ ನೆನಪಿನಲ್ಲಿ ನೊಂದು-ಬೆಂದು ಅವಳ ಸೌಂದರ್ಯವನ್ನು ಪ್ರಕೃತಿ ಸೌಂದರ್ಯದೊಂದಿಗೆ ಬೆರೆಸಿ ಸಂತೋಷ ಪಡುತ್ತಿರುವ ಕವಿಯ ಮನಸ್ಸು ಒಬ್ಬ ನಿರ್ಮಲ ಪ್ರೇಮದ ಪ್ರೇಮಿಯ ಮನಸ್ಸನ್ನು ಪ್ರತಿಬಿಂಬಿಸುವುದು.

ತನ್ನ ಸಖನಿಗಾಗಿ ಅತ್ತು ಸುಸ್ತಾದ ತನ್ನ ಪ್ರೇಯಸಿಯ ಮನಸ್ಸಿನ ತಳಮಳವನ್ನು ಬೇಂದ್ರೆಯವರು ಚಿತ್ರಿಸುತ್ತಾ 'ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣ ಪೊಗರು

ಬೆಚ್ಚನುಸಿರ ನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು ಗಲ್ಲದಲ್ಲಿ ಕೈ, ಒರೆ ಮೋರೆ, ನಿಡಿಗೂದಲುದ್ಧ ಚಿಂತೆ ಮೋಡ ಮುಸುಕಲಿರೆ ಆ ದೀನ ಚಂದ್ರನಂತೆ'

ಉತ್ತರ ಮೇಘ-24

ಕಾವ್ಯದ ಸೌಂದರ್ಯ ಅಡಗಿರುವುದು ಶಬ್ದ ಜೋಡಣೆಯಲ್ಲಿ. ಬೇಂದ್ರೆಯವರ ಕಾವ್ಯ 'ನಾನು ಮತ್ತು ನೀನು' ಎಂಬ ಸಂಬಂಧಕ್ಕೆ ನಿಲುಕುವಂತಹುದು. ಕಾವ್ಯ ಒಂದು ಅನುಭವವಾಗಿರುವುದರಿಂದ ಅದರ ವಾಚನವೂ ಒಂದು ಅನುಭವವೇ ಆಗಿದೆ. 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳಲ್ಲಿ ನಾನು ಮತ್ತು ನೀನು ಸಂಬಂಧಗಳೇ ಕಾವ್ಯಕ್ಕೆ ವಿಶೇಷವಾದ ಸೌಂದರ್ಯವೊಂದನ್ನು ಸೃಷ್ಟಿಸಿದೆ. ನಾನು ಮತ್ತು ನೀನು ಸಂಬಂಧವನ್ನು ಗಟ್ಟಿಗೊಳಿಸಲು ಕವಿ ಪ್ರಕೃತಿಯನ್ನು ಪ್ರೇರಣೆಯಾಗಿ ಬಳಸಿಕೊಂಡಿದ್ದಾರೆ. ನಿಸರ್ಗ ಬೇಂದ್ರೆಯವರ ಪ್ರೇರಕ ಶಕ್ತಿಗಳಲ್ಲಿ ಒಂದು

ಬೆಟ್ಟಕೊಲಿಯೆ ಮನ ಬೆಟ್ಟದಂತೆ ಬಗೆಹರುಹು ಎತ್ತರಹುದು
ಹೊಳಗೆ ಒಲಿಯೆ ಮನ ಹೊಳೆಯೆ ಹಾಗೆ ಬಗೆ ಭಾವ ಹೊಳಿಸುತಿಹುದು
ಬೆಟ್ಟಹೊಳೆಯ ಒಟ್ಟಿರದು, ನಿನ್ನ ಬಗೆ ಎಂಥ ಭವ್ಯ ರುಚಿಯು
ಕಡಲಿನಂತೆ ಗಂಭೀರಗುಂಭ ! ಸೌಂದರ್ಯದಂತೆ ಶುಚಿಯು

ಇಲ್ಲಿನ ನುಡಿಗಳು ನಿಷ್ಕಾಮ, ನಿರ್ಮಲವಾದ ಮನಸ್ಸನ್ನು ಸ್ಪಷ್ಟಪಡಿಸುತ್ತಿದೆ. ಬೆಟ್ಟ ಮತ್ತು ಹೊಳೆಯ ನಡುವಿನ ಪ್ರಕೃತಿ ಸಂಬಂಧ ಸಖ-ಸಖಿ, ಪತಿ-ಪತ್ನಿಯರ ನಡುವಿನ ಸಂಬಂಧಕ್ಕೆ ಹೋಲಿಸಲಾಗಿದೆ.

ದಾಂಪತ್ಯದ ನೋವು, ನಲಿವು, ಸ್ನೇಹ, ಪ್ರೇಮ, ಸೋಲು-ಗೆಲುವು, ಆತಂಕ, ಉಲ್ಲಾಸವನ್ನು ಬೇಂದ್ರೆಯವರ ಸಖ-ಸಖಿ ಬದುಕಿನಲ್ಲಿ ಮೂಡಿಬಂದಿರುವಂತದನ್ನು ಸಖೀಗೀತದಲ್ಲಿ ಕಾಣಬಹುದು 'ವಿಧಿ' ತಂದ ವಧುವನ್ನು ಸಖಿಯಾಗಿ ಕಂಡು ಬದುಕಿನ ಅತ್ಯಂತ ಆನಂದದ ಕ್ಷಣಗಳನ್ನು ಆಕೆಯೊಂದಿಗೆ ಬೇಂದ್ರೆ ಕಳೆದಿರುವುದೇ ಆ ಕಾವ್ಯವು ವಿಶೇಷವಾಗಿ ಕಾಣಲು ಸಾಧ್ಯ ವಿವಾಹ ಸಂದರ್ಭದಲ್ಲಿ ಅಂತಃಪಟದಾಚೆ ನಿಂತಿರುವ ತನ್ನ ಬಾಳ ಸಂಗಾತಿಯಾಗಿ ಬರುವ ಸಖಿಯನ್ನು ನೋಡುವುದು ಪ್ರಕೃತಿ ಸಹಜವಾಗಿ ಬೆವರಿನ ಬಾಸಿಂಗ ಕಟ್ಟಿಕೊಂಡ, ಬೆವರಿನ ಹನಿಯೊಂದನ್ನು ಮೂಗು ಬಟ್ಟಾಗಿ ಧರಿಸಿದ ಸೌಂದರ್ಯದಲ್ಲಿ

ಮುತ್ತಿಗು ಮಿಗಿಲಾಗಿ ಹೂವಿಗೂ ಹಿರಿದಾಗಿ
ಬೆವರ್ಹನಿ ಬಾಸಿಂಗ ತುಳುಕುತಿರೆ
ನತ್ತರು ನಾಚಿಸಿ ಬೆವರಿನ ಹನಿಯೊಂದು
ಮೂಗು ಬಟ್ಟಿನ ಅಂದ ಮಿನುಗುತಿರೆ !

ಸಹಜ ಸೌಂದರ್ಯವನ್ನು ಸಹಜವಾದ ಪ್ರಕೃತಿಯ ಸೌಂದರ್ಯದಲ್ಲಿ ವರ್ಣಿಸಿದ್ದಾರೆ. ಪ್ರಿಯ ಸಖಿಯು ಭೌತಿಕ ಒಡವೆಗಳಿಗಿಂತ ನಿಸರ್ಗ ಸಹಜ ಸೌಂದರ್ಯದಲ್ಲಿ ಮಿನುಗುತ್ತಿರುವ ತಾರೆಗಳ ಹಾಗೆ ಶೃಂಗಾರಗೊಂಡಿರುವ ಸಖಿಯನ್ನು ಬದುಕಿನ ಹೋರಾಟಕ್ಕೆ ಸಹಾಯಾಸ್ತ ನಿರೀಕ್ಷಿಸಿ ಬಾಳಿನ ಸಖಿಯಾಗು ಬಾ ಎಂದು ಯಾಚಿಸುವಂತಿದೆ. ಸೌಂದರ್ಯ ಎಂಬುದು ಸಹಜವಾಗಿ ಕವಿಯ ಕಲ್ಪನೆಯಲ್ಲಿರುವಂತದ್ದು. ಆದರೆ ಇಲ್ಲಿ ಸೌಂದರ್ಯ, ಬೇಂದ್ರೆ ಕಾಣುವ ಪ್ರತಿಯೊಂದು ಸಣ್ಣ ವಸ್ತುವಿನಲ್ಲಿ ಅಡಗಿರುತ್ತದೆ.

ಬೇಂದ್ರೆಯವರ ಸೌಂದರ್ಯ ಪ್ರಜ್ಞೆ ಸಂಕುಚಿತವಾದುದಲ್ಲ. ದುಃಖದ ಸಂದರ್ಭಗಳು ಬೇಂದ್ರೆಯಲ್ಲಿ ರಸವಾಗಿಯೇ ಹರಿಯುತ್ತದೆ.

'ಇರುಳು ತಾರೆಗಳಂತೆ ಬೆಳಕೊಂದು ಮಿನುಗುವುದು
ಕಳೆದ ದು:ಖಗಳಲ್ಲಿ ನೆನೆದಂತೆಯೆ
ಪಟ್ಟ ಪಾಡೆಲ್ಲವು ಹುಟ್ಟ ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿವೆ.'

ಸುಖ-ದುಃಖಗಳನ್ನು ಸಮನಾಗಿ ಸ್ವೀಕರಿಸುವ ಬೇಂದ್ರೆಯವರು, ದುಃಖವನ್ನು ಅತ್ಯಂತ ಕಠಿಣವಾಗಿ ಚಿತ್ರಿಸಿಲ್ಲ. ದುಃಖವನ್ನು ಸುಖದಂತೆಯೇ ಅನುಭವಿಸಿ ಅದನ್ನೂ ರಸಪಾಕವಾಗಿ ಕಾಣುವ ಬೇಂದ್ರೆಯವರು ಅವರ ವ್ಯಕ್ತಿತ್ವದ ಮಜಲುಗಳನ್ನು ಬಿಚ್ಚಿಡುವುದು, ಸಂಕಟ ಬಂದಾಗ ವೆಂಕಟರಮಣ ಎನ್ನುವ ಸ್ವಭಾವ ಬೇಂದ್ರೆಯವರದಲ್ಲ. ಬದುಕಿನ ಹಿಡೀ ಜೀವನವನ್ನು ಏಕ ತಾಳದಲ್ಲಿ ಕುಣಿಸಿದವರು ಬೇಂದ್ರೆಯವರು. ಪ್ರತಿ ಕಾಲಕ್ಕೂ ಜೀವನ ಅತ್ಯಂತ ಮಧುರ ಎಂಬುದನ್ನು ಸಖೀಗೀತದಲ್ಲಿ ತಿಳಿಯುವಂತಾದ್ದಾಗಿದೆ.

ಮದುವೆಯ ನಂತರವೇ ಪತಿ-ಪತ್ನಿಯರು ಒಬ್ಬರನ್ನೊಬ್ಬರು ಅತ್ಯಂತ ಸಮೀಪದಿಂದ ಅರ್ಥಮಾಡಿಕೊಳ್ಳಲು ಸಾಧ್ಯ. ಕವಿ ವಿವಾಹ ನಂತರ ಅವರ ಪ್ರಣಯ ಸಂತಸದ ಆನಂದವನ್ನು ವರ್ಣಿಸಿರುವ ಬಗ್ಗೆ ಪ್ರತಿಯೊಬ್ಬ ವಿವಾಹಿತನ ಪ್ರಣಯದ ದಿನದ ಅನುಭವವನ್ನು ಹೇಳುವಂತಿದೆ.

'ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏಕಾಂತ ಕೆಳೆಸಿದೆ ಎಳೆ-ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆ ಬೆಳದೆವೇ'

ಮನ-ಬನ ಚಿಗುರಿಸಿದ ಸತಿಯಿಂದ ನಿರೀಕ್ಷೆಯ ಆನಂದವನ್ನು ಪಡೆದಾಗ ತನ್ನಲ್ಲುಂಟಾಗುವ ಪುಳಕ, ಸಂತೋಷ, ಸೆಳೆತ ಎಲ್ಲವನ್ನು ಕವಿ ಪ್ರತಿಬಿಂಬಿಸಿದ್ದಾರೆ.

'ಕನ್ನಡ ಮೇಘದೂತ' ಕಾವ್ಯದಲ್ಲಿ ಬೇಂದ್ರೆಯವರ ಸೌಂದರ್ಯ ಪ್ರಜ್ಞೆ ಲೀಲಾ ಜಾಲವಾಗಿ ಹರಡಿ ಕಂಗೊಳಿಸುತ್ತಿರುವುದು. ಅಲ್ಲಿಯೂ ವಿವಾಹಿತರಾಗಿ ಅಗಲಿದ್ದ ಯಕ್ಷ-ಯಕ್ಷಿಯರ ವಿರಹ ವೇದನೆಯನ್ನು ಕಾಣುವೆವು. ಬೇಂದ್ರೆಯವರು ಅವರ ಬೆಡಗಿನ ಭಾಷೆ ಮತ್ತು ಪದಲಾಲಿತ್ಯಗಳ ರಸವತ್ತಾದ ಶೈಲಿಗಳಿಂದ ಸೌಂದರ್ಯ ರಾಶಿಯನ್ನೇ 'ಮೇಘದೂತ'ದಲ್ಲಿ ತಂದಿದ್ದಾರೆ. ಕಾಳಿದಾಸನನ್ನೇ ಮೀರಿಸುವಷ್ಟರ ಮಟ್ಟಿಗೆ ಪ್ರತಿಯೊಂದು ಸಾಲಿಗೂ ಶೃಂಗಾರ ಕಿರೀಟವನ್ನು ಅಳವಡಿಸಿದ್ದಾರೆ. ಕುಬೇರನ ಶಾಪಕ್ಕೆ ಗುರಿಯಾದ ಯಕ್ಷ ತನ್ನ ಇನಿಯಳಿಂದ ಅಗಲಿದ ಕ್ಷಣಗಳಲ್ಲಿ ತನ್ನ ಸಖಿಯನ್ನು ನೆನೆದು ದುಃಖಿಸುವ ರೀತಿಯು ವೇದನೆಯಿಂದ ಕೂಡಿದ್ದು ಪ್ರಕೃತಿಯಲ್ಲಿ ವರ್ಣನೆಯೊಂದಿಗೆ ಬಣ್ಣಿಸಲಾಗಿದೆ. ಅಗಲಿ ಇದ್ದರೂ ಆಸೆಗೊಂಡಿರಲು ಗಿರಿಯೊಳಂತು ಇಂತು ಕೆಲವೆ ತಿಂಗಳಲಿ ಚಿನ್ನದ ಕಡಗ ಮೊಳಕೈಗೆ ಸರಿದು ಬಂತು ಕಾರ ಹುಣ್ಣಿಮೆಯ ಮಾರನೆಯ ದಿನವೆ ಮೋಡ ಕೋಡನಪ್ಪಿ ಕಂಡಿತೊಡ್ಡಿನೋಡಿಕ್ಕೆಯಾಡುವಾ ಆನೆ ಬೆಡಗನಪ್ಪಿ.



ಆಷಾಡಸ್ಯ ಪ್ರಥಮ ದಿನವೇ ಅಂದರೆ ಕಾರ ಹುಣ್ಣಿಮೆಯ ಮಾರನೆಯ ದಿನವೇ ಹದಿನೈದು ದಿನ ತಡವಾಗಿ ಆಷಾಡ ಬಹೂ ಪ್ರತಿಪದೆಯಾಗಿದೆ. ಮೋಡ ಕೋಡನೊಪ್ಪಿದಂತೆ ಡಿಕ್ಕಿಯಾಡುವ ಆನೆಯಂತೆ ತನ್ನ ಬಯಕೆ ಚಿಗುರೊಡೆದು ತನ್ನ ಸಖಿಯನ್ನು ನೋಡುವ ಮಾತಾಡುವ ಸೇರುವ ಹಂಬಲವನ್ನು ಯಕ್ಷನ ಮನಸ್ಸು ವ್ಯಕ್ತಪಡಿಸುತ್ತಿದೆ. ಮೇಘದೂತದ ಕಾವ್ಯದುದ್ದಕ್ಕೂ ನಿಸರ್ಗದ ಸಹಜ ವರ್ಣನೆಗಳನ್ನೇ ಬಳಸಿಕೊಂಡಿದ್ದು, ಗುಡ್ಡ, ಹೊಳೆ, ಜನ, ಜನಪದ, ಪಶು, ಪಕ್ಷಿಗಳು ಬೇಂದ್ರೆ ಕಾವ್ಯದಲ್ಲಿ ವಿಶೇಷವಾದ ಸೌಂದರ್ಯದೊಂದಿಗೆ ಮಿನುಗುತ್ತವೆ. ವಿರಹದಿಂದ ಬಳಲುವ ಯಕ್ಷನ ಅಗಲಿಕೆಯು ವಿಕಾರ ವಿಕೃತಗೊಳ್ಳದಂತೆ ಪೂರಕವಾದ ಅನೂಕೂಲವಾದ ಭಾವನೆಗಳನ್ನು ಸೃಷ್ಟಿಸಲಾಗಿದೆ.

ಬೇಂದ್ರೆಯವರು ಕಂಡ ಕನ್ನಡ ಕಾವ್ಯ ಮಾರ್ಗದಲ್ಲಿನ ಹೊಸ ಹೆಜ್ಜೆಯನ್ನು ಕುರಿತು ಡಾ. ಜಿ. ಕೃಷ್ಣಪ್ಪ ಅವರು ಕೆಲವು ಚಿಂತನೆಗಳನ್ನು ಪಟ್ಟಿ ಮಾಡುತ್ತಾರೆ.

1) ಐಂದ್ರಿಕ, ಕಾಲ್ಪನಿಕ, ಬೌದ್ಧಿಕ, ಆದರ್ಶ ಎಂಬ ಚತುರ್ಮುಖ ಸೌಂದರ್ಯದ ವಿಶ್ಲೇಷಣೆಯನ್ನು ಮಾಡಿತು.

2) ರಸ, ರಮಣೀಯತೆ, ಪ್ರೇಮ, ಆನಂದ ಎಂಬ ನಾಲ್ಕು ಬಗೆಯ ಜ್ಞಾನವನ್ನು ಪ್ರತಿಪಾದಿಸಿತು.

3) ಬಾಳಿನ ನಿಜವನ್ನೂ ಶಬ್ದದಂತೆ ಸಂಖ್ಯೆಯಲ್ಲಿಯೂ ಅರಿಯಲು ಹವಣಿಸಿತು.

4) ಭೋಗಕಾವ್ಯದ ಮೇರೆ ಮೀರಿ ಯೋಗಕಾವ್ಯದ ಸಂಚಾರ ಸಾಗಿಸಿ–ನಾನು, ನೀನು, ಆತನು, ತಾನು ಎಂಬ ನೆಲೆಗಳನ್ನು ತಲುಪಿತು.

5) ಭಾವ ಛಂದ, ಧ್ವನಿ ಮತ್ತು ಸಹೃದಯತೆಯ ಸಾಕ್ಷಾತ್ಕಾರಕ್ಕಾಗಿ ಯೋಗ ಸಾಧನೆಯನ್ನು ಮಾಡಿತು.

6) ಸಂಖ್ಯಾ ಸಾಮರಸ್ಯ ಕಂಡಿತು.

ಈ ಮೇಲಿನ ಎಲ್ಲಾ ಅಂಶಗಳು ಬೇಂದ್ರೆಯವರ 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಕ್ಕೂ ಅನ್ವಯಿಸುವಂತದ್ದು. ಯಾವ ರೀತಿಯಿಂದಲೂ ಕಮ್ಮಿ ಎನಿಸದ ಅವರ ಕಾವ್ಯಗಳು ಓದುಗರ ಮನಸ್ಸಿಗೆ ಮುದ ನೀಡುವಂತವು.

ಬೇಂದ್ರೆಯವರ 'ಸಖೀಗೀತ' ಕಾವ್ಯವನ್ನು ಕುರಿತು ಸುಮತೀಂದ್ರ ನಾಡಿಗರು ಈ ರೀತಿ ಹೇಳಿದ್ದಾರೆ. 'ಬೇಂದ್ರೆಯವರ 'ಸಖೀಗೀತ' ಎಷ್ಟು ಭಾರಿ ಓದಿದರೂ ಹೊಸ ಹೊಸ ವಿನ್ಯಾಸಗಳಲ್ಲಿ ಕಾಣಿಸುತ್ತದೆಯಾದ್ದರಿಂದ ಇದನ್ನು ಮತ್ತೆ ಮತ್ತೆ ಓದಬೇಕು' ಎಂದು ಹೇಳುತ್ತೇನೆ (ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು ಪುಟ–166) ಬೇಂದ್ರೆಯವರ ಕಾವ್ಯ ಲೋಕವೇ ಹೀಗೆ. ಪ್ರತಿ ಸಾರಿ ಓದಿನಲ್ಲೂ ಹೊಸ ಹೊಸ ವಿಚಾರಗಳನ್ನು ಸೃಷ್ಟಿ ಮಾಡುತ್ತವೆ. ಅವರ ಭಾಷಾ ರಚನೆಯೇ ಆಗಿರುತ್ತದೆ.

## ಅಧ್ಯಾಯ – ಐದು

## ಬೇಂದ್ರೆ ಕಾವ್ಯದಲ್ಲಿ ಪ್ರತಿಮೆ–ರೂಪಕಗಳ ಬಳಕೆ : ಒಂದು ವಿಶ್ಲೇಷಣೆ

ಬೇಂದ್ರೆ ಕಾವ್ಯದ ಅಭಿವ್ಯಕ್ತಿಯ ಕ್ರಮ ಹೊಸಗನ್ನಡ ಕಾವ್ಯದ ಕವಿಗಳಲ್ಲಿ ವಿಶಿಷ್ಟವೆಂದೇ ಹೇಳಬಹುದು. ರೂಪಕಗಳ ಭಾಷೆಯಲ್ಲಿ ಹೆಚ್ಚು ಮಾತನಾಡಿದ ಕವಿ ಬೇಂದ್ರೆ ಎಂದು ಹೇಳಬಹುದು. ಬೇಂದ್ರೆಯವರ ರೂಪಕಗಳು ಸುತ್ತಣ ನಿಸರ್ಗ ಮತ್ತು ಜೀವನದಿಂದ ರೂಪ ತಳೆದವುಗಳಾಗಿವೆ. ಎಸ್ತ–ಕನ್ನಡಿ ಹರಳು, ಸವಿ ಸತ್ತ ತಾಂಬೂಲ, ಸುಟ್ಟ ಹಪ್ಪಳ, ಗಾಳಿ ಕೊಳಲು ಇಂತಹ ಉಪಮೆ ರೂಪಕಗಳಿಂದ ಕಾವ್ಯ ಸೌಂದರ್ಯದಲ್ಲಿ ಇನ್ನೂ ಹೊಳಪು ಮೂಡುತ್ತದೆ.

ಬೇಂದ್ರೆಯವರ ಅನೇಕ ಕಾವ್ಯಗಳು ಅವರ ಬದುಕಿನ ಅನೇಕ ಸಂಗತಿಗಳಿಂದ, ಘಟನೆಗಳಿಂದಲೇ ತುಂಬಿವೆ. ಬಡತನ, ಮಕ್ಕಳ ಸಾವು, ನಿರುದ್ಯೋಗ, ಸೆರೆಮನೆ ವಾಸ ಈ ಕಾರಣದಿಂದ ಪತಿ–ಪತ್ನಿಯರಲ್ಲಿ ಇರುಸು–ಮುರುಸು ಇದರ ಫಲವಾಗಿ ದುಃಖ, ವೇದನೆ ಈ ದುಃಖವನ್ನೇ ಸೊಗಸಾದ ಕಾವ್ಯವಾಗಿ ಮಾಡಿರುವುದನ್ನು ಸಖೀಗೀತದಲ್ಲಿ ಕಾಣುತ್ತೇವೆ.

ಕಾವ್ಯದ ಸೌಂದರ್ಯ ಅಡಗಿರುವುದು ಆ ಕಾವ್ಯದಲ್ಲಿನ ಪ್ರತಿಮಾ ರೂಪಕಗಳಲ್ಲಿ ಬೇಂದ್ರೆಯವರು ಪ್ರಾಸಗಳನ್ನು ಬಳಸಿಕೊಂಡಂತೆ ಪ್ರತಿಮೆ ರೂಪಕಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ. 'ಮೇಘದೂತ' ಮತ್ತು 'ಸಖೀಗೀತ' ಕಾವ್ಯಗಳಲ್ಲಿ ಹೆಚ್ಚು ಪ್ರತಿಮಾ ರೂಪಕಗಳನ್ನು ಕಾಣುತ್ತೇವೆ.

ಸುಮತೀಂದ್ರ ನಾಡಿಗರವರು ಬೇಂದ್ರೆಯರ ರೂಪಕಗಳ ಬಗ್ಗೆ ಕುರಿತು 'ಬೇಂದ್ರೆಯವರ ರೂಪಕಗಳ ಭಾವ–ಗರ್ಭಧಾರಣ–ಸಾಮರ್ಥ್ಯ ಎಷ್ಟಿರುತ್ತದೆ ಎಂದರೆ, ಅವರ ರೂಪಕಗಳು ಭಾವಸಾಮರ್ಥ್ಯವನ್ನು ಗರ್ಭಸಾಮರ್ಥ್ಯವನ್ನು ಧಾರಣ ಸಾಮಾರ್ಥ್ಯವನ್ನು ಒಟ್ಟಾಗಿ ಪಡೆದಿರುತ್ತದೆ' ಎಂದಿದ್ದಾರೆ. ಎಲ್ಲಾ ರಸಪಾಕಗಳನ್ನು ಕಾವ್ಯದಲ್ಲಿಯೇ ಹಿಡಿದಿಡುವ ಪ್ರಯತ್ನದಲ್ಲಿ ರೂಪಕಗಳ ಪಾತ್ರ ಬೇಂದ್ರೆ ಕಾವ್ಯದಲ್ಲಿ ಗಮನೀಯವಾದುದು. ಕವಿಯೊಬ್ಬ ಗಾರುಡಿಗನಂತೆ ತನಗೆ ತಿಳಿಯದ ಹಾಗೆ ಕಾವ್ಯದ ಸೌಂದರ್ಯದ ಗುಟ್ಟೇ ಅರಿಯದಂತೆ ಶ್ರೇಷ್ಠ ಕಾವ್ಯ ಎನಿಸುಕೊಳ್ಳಲು ಪ್ರತಿಮಾ ಉಪಮೆ ರೂಪಕಗಳು ಕಾವ್ಯದಲ್ಲಿ ಸಮರ್ಪಕವಾಗಿ ಬಳಸಿ ಕೊಂಡಿರಬೇಕು. ಈ ಸಮರ್ಪಕ ರೂಪಗಳನ್ನು ಬೇಂದ್ರೆಯವರು ಪ್ರತ್ಯಕ್ಷವಾಗಿ ಬಳಸಿಕೊಂಡಿದ್ದಾರೆ.

ಮಯಾಕಿನ್ನರಿಯಲ್ಲಿ ಮರುಳುಸಿದ್ಧ ಮತ್ತು ಕಾಡು ಸಿದ್ಧರಿಬ್ಬರು ಉತ್ತರ ದಿಗ್ವಿಜಯ ತೀರಿಸಿ, ದಕ್ಷಿಣ ಕರ್ನಾಟಕಕ್ಕೆ ಬಂದರು. ಕೊಲ್ಲಾಪುರದ ಮಾಯೆ ಎಂಬ ಯೋಗಿನಿಯು ಸಾವಿರ ಯೋಗಿಗಳನ್ನು ಸೋಲಿಸಿ ತನ್ನ ಮನೆಯಲ್ಲಿ ಊಳಿಗದಾಳುಗಳನ್ನಾಗಿ ಕೆಲಸಕ್ಕೆ ಇಟ್ಟುಕೊಂಡಿದ್ದನ್ನು ಕೇಳಿದರು. ಮಾಯೆಯೊಡನೆ ಇವರ ವಾಗ್ವಾದ ನೆಡೆದು ಕೊನೆಗೆ ಮಾಯೆ ಇವರಿಬ್ಬರಿಗೆ ಎಲ್ಲಾ ರೀತಿಯಲ್ಲೂ ಸೋತಳು. ಮಂತ್ರ ತಂತ್ರದಿಂದರೂ ಇವರನ್ನು ಸೋಲಿಸಬೇಕೆಂದು ಪ್ರಯತ್ನಿಸಿದ ಮಾಯೆಯನ್ನು ಮರಳು ಸಿದ್ಧ, ಕಾಡು ಸಿದ್ಧರೆ ಅದೇ ಮಂತ್ರಗಳಿಂದ ಅವಳನ್ನು ಮಾಯ ಕಿನ್ನರಿಯನ್ನಾಗಿ ಮಾಡಿಕೊಂಡು ಹೊತ್ತು ಹೊರಟರು. ಮೊದಲ ಸಲ ಈ ಕಿನ್ನರಿಯನ್ನು ಭಾರಿಸಬೇಕೆಂದಾಗ ಪ್ರಣಯ ಕುಪಿತ ಮಾನಿನಿಯಂತೆ ಅದು ಕೋಪಗೊಂಡಿತು. ಸಿದ್ಧರು ಮಾನಿನಿಯನ್ನು ಒಲಿಸಿಕೊಂಡಂತೆ ಮಾಯೆಯನ್ನು ಒಲಿಸಿಕೊಂಡರು ಸಿದ್ದರಿಗೆ ಸೋತು ಶರಣಾದ ಸಂದರ್ಭವನ್ನು ಕವಿ–

'ಪ್ರಕೃತಿ–ಪುರುಷಗೆ ಸೋತು ಪ್ರಾಣದ್ಹಂಜಿಯೆ ನೂತು
ಅನುಭವದ ಕಿವಿಮಾತು ಆಧಾಂಗ
ಹಾಸಾದ ಹಾಡೀಗೆ ಹೊಕ್ಕಿತು ಕಿನ್ನರಿ
ನೆಯ್ಗಿಯೊಳಗ ನೂಲು ಹೋಧಾಂಗ'

ಇಲ್ಲಿ ಮರಳುಸಿದ್ಧನ ಮತ್ತು ಮಾಯೆಯ ಸಂಬಂಧ ತನ್ನ ದೈಹಿಕ ನೆಲೆಯನ್ನು ಉಳಿಸಿಕೊಂಡು ಆಧ್ಯಾತ್ಮಿಕ ನೆಲೆಗೂ ಏರುತ್ತದೆ. ಅವರ ಅಂತಃಸತ್ವದ ಹತ್ತಿಯನ್ನು ನೂತು ಅನುಭವದ ಕಿವಿ ಮಾತು ಆದ ಹಾಗೆ ಅವರಿಬ್ಬರು ಹೊಂದಾಗುತ್ತಾರೆ. ಅವನ ಹಾಡು ಹಾಸಾದರೆ ಕಿನ್ನರಿಯ ನುಡಿ ಅದಕ್ಕೆ ಹೊಕ್ಕಾಗಿ ನೆಯ್ಗೆಯೊಳಗೆ ನೂಲು ಹೋದ ಹಾಗೆ ಅವರು ಒಂದಾಗುತ್ತಾರೆ. ಇಲ್ಲಿ ಹಂಜಿ ಪ್ರತಿಮೆ ವಿಸ್ತಾರಗೊಂಡಿರುವುದನ್ನು ಗಮನಿಸಬಹುದು.

ಇದರಲೋ ಬರುವಂತ ತಂತ್ಯಲ್ಲ ಪ್ರತಿಮೆ ಮರಳು ಸಿದ್ಧ ಮಾಯೆಗೆ ನೀ ತಂತ್ಯಲ್ಲ ಜೀವದ ತಂತು ನೀ ಎಂದು ಹೇಳುತ್ತಿರುವಂತಿದೆ ಅವರಿಬ್ಬರ ಜೀವರಸವನ್ನು ಆ ತಂತಿಯ ಮೇಲೆ ಹಿಂಡಿ ತಂತಿಯನ್ನು ಮಿಡಿದಾಗ ರಸಗಾನ ಹರಿದು ಬಂತು ಎಂಬುದರಲ್ಲೋ ಅವರಿಬ್ಬರ ಜೀವಗಳು ಬೆರೆತವು ಎಂಬುದಿದೆ. ಜುಮ್ ಜುಮು ರುಮು ಜುಮು ಗುಂಗುಣು ದುಮುದುಮು ಎಂದು ನಾದದ ನದಿ ಹರಿದಾಂಗ ಅವರ ಪ್ರೇಮ ಪ್ರವಾಹವಾಗಿ ಹರಿದಿದೆ 'ನಾದದ ನದಿ' ಎನ್ನುವ ರೂಪಕದ ಕ್ರೂಢೀಕರಣದಿಂದ ಶಬ್ದ–ಸ್ಪರ್ಶ–ರೂಪಗಳ ಸಂಯುಕ್ತ ಪ್ರತಿಮೆಯೊಂದನ್ನು ಸೃಷ್ಟಿಸಿದ್ದಾರೆ.

ಮಾಯಾ ಕಿನ್ನರಿಯಲ್ಲಿ ಅಮೂರ್ತವಾದದ್ದನ್ನು ಮೂರ್ತೀಕರಿಸುತ್ತಾ ಅದನ್ನೇ ವ್ಯಂಜಿಸುವ ವಿಧಾನವಿದೆ. ಉಪಮಾನಗಳಲ್ಲಿ ರೂಪಕಗಳನ್ನು ಅಡಗಿಸಿಡುವ ಪ್ರಯತ್ನವನ್ನು ಕವಿ ಮಾಡಿದ್ದಾರೆ. ಬೇಂದ್ರೆಯವರು ತಮ್ಮ ದಾಂಪತ್ಯ ಜೀವನವನ್ನು ಸಾರ್ವತ್ರಿಕವಾಗಿ ಹಾಡಿ ಸಂತಸದ ಭಾವದಲ್ಲಿ ಸಖ್ಯಾದ ಆಹ್ವಾನವನ್ನು ಕಾವ್ಯಗಳಲ್ಲಿ ಶೃಂಗಾರಗೊಳಿಸಿದ್ದಾರೆ.

ಇರುಳು ತಾರೆಗಳಂತೆ ಬೆಳಕೊಂದು ಮಿನುಗುವುದು
ಕಳೆದ ದು:ಖಗಳಲ್ಲಿ ನೆನೆದಂತೆಯೆ
ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿವೆ

ಎಂಬ ನುಡಿಗಳಲ್ಲಿ ದುಃಖದ ದಿನವನ್ನು ಪ್ರತಿಮಾತ್ಮಕವಾಗಿ ಇರುಳು-ಕತ್ತಲು ಎಂದು ಕರೆದು ಅಲ್ಲಿಯೂ ಸಹ ತಾರೆಗಳಂತೆ ಸುಖದ ಬೆಳಕು ಮಿನುಗಿದೆ ಎಂದು ಹೇಳಿದ್ದಾರೆ. ದುಃಖದ ಪ್ರತೀಕ ಇರುಳಾದರೆ ಅದೇ ದುಃಖದಲ್ಲಿ ತಾವಿಬ್ಬರೂ ಪಟ್ಟ ಸುಖವು ತಾರೆಗಳ ಬೆಳಕಾಗಿದೆ. ಕವಿಯ ಇಂತಹ ಭಾವನೆಗಳು ನೊಂದು-ಬೆಂದ ಜೀವಗಳಿಗೆ ಸಾಂತ್ವನ ಹೇಳುತ್ತಿರುವ ವೇದ ವಾಕ್ಯಗಳಂತೆ ತೋರಿ ಬರುವುದು.

ಸಾಮಾನ್ಯ ಜನರ ಬದುಕು ಎಷ್ಟು ದಾರುಣವಾದುದ್ದು ಎಂಬುದನ್ನು

'ತಾಂಡವ ನಡೆಸಿದ ಝುಂಝಾವಾತದ
ಕಾಲಿನ ಹುಲುಗೆಜ್ಜೆ ನಾವಾಗಿರೆ'

ಎಂದು ಮಳೆಯೊಡನೆ ಬೀಸುವ ಬೀಕರ ಬಿರುಗಾಳಿಯನ್ನು ಝುಂಝಾವಾತ ಎನ್ನುವರು. ಇಲ್ಲಿನ ಪ್ರತಿಮೆ ಅವರ ಬದುಕಿನ ಘೋರತೆಯನ್ನು ಧ್ವನಿಸುತ್ತದೆ. ಕರಡಿ ಮಜಲಿನ ಶಬ್ದವನ್ನು ಮೀರಿಸುವಂತದ್ದು. ಝುಂಝಾವಾತ. ಇಂತಹ ಕುಣಿತದವರ ಹೆಜ್ಜೆಯು ಕರಡಿ ಕುಣಿತದ ಶಬ್ದದಲ್ಲಿ ತನ್ನ ಅಸ್ತಿತ್ವವನ್ನು ಕಳೆದು ಕೊಳ್ಳುವಂತೆ ತಮ್ಮ ಬದುಕಿನ ಅಸ್ತಿತ್ವ ಯಾವ ಸ್ಥಿತಿಯಲ್ಲಿ ಯಾವ ದಿಕ್ಕಿನಲ್ಲಿ ಸಾಗುತ್ತಿದೆ ಎಂಬುದಕ್ಕೆ ಈ ಪ್ರತಿಮೆ ಸಾಕ್ಷಿಯಾಗಿ ನಿಲ್ಲುತ್ತದೆ.

ಬೇಂದ್ರೆಯರ ಕಾವ್ಯದಲ್ಲಿ ರೂಪಕಶಕ್ತಿ, ಚಿತ್ರಕಶಕ್ತಿ, ಉಮಮೆ ಪ್ರತಿಮೆಗಳ ಜೊತೆಗೆ ಸೃಷ್ಟಿಕಾರ್ಯವು ಭಾವ-ಬುದ್ಧಿಗಳ ಸಂಯೋಗದಲ್ಲಿ ನಡೆದಿರುತ್ತದೆ. ಬೇಂದ್ರೆಯವರ ಪ್ರತಿಮಾಲೋಕದ ಆಳ ವಿಸ್ತಾರವಾದುದು, ಭೂಮಿ, ಆಕಾಶ, ಪಂಚಭೂತಗಳು ಅಂತರಿಕ್ಷದ ಗ್ರಹಮಾಲೆ, ನಕ್ಷತ್ರಗಳು, ಪ್ರಾಣಿ ಹಾಗೂ ಸಸ್ಯ ಪ್ರಪಂಚ ವೈದಿಕ ವಾಙ್ಮಯ ಹಾಗೂ ಪುರಾಣಗಳು, ಋತು ಚಕ್ರದಂತ ಪ್ರಾಕೃತಿಕ ಘಟನೆಗಳು ಮಾನವನ ಸಂಸ್ಕೃತಿ ಹಾಗೂ ಕ್ರಿಯಾ ಪ್ರಪಂಚ, ಸಂಖ್ಯೆಗಳೂ, ವಿಜ್ಞಾನ ಹೀಗೆ ಇಂಥ ಅನೇಕ ಕ್ಷೇತ್ರಗಳಿಂದ ಅವರು ಪ್ರತಿಮೆಗಳನ್ನು

ಸೃಷ್ಟಿಸಿರುವರು. ಶುದ್ಧ ಪ್ರತಿಮೆಗಳನ್ನು ಬಳಸಿದ ಅವರು ಭಾವವಾಹಕಗಳಾಗಿ ಸೃಷ್ಟಿಸುತ್ತಿದ್ದರು.

ಸಖೀಗೀತದಲ್ಲಿ ಸಾಧನಕೇರಿಯ ಸುಂದರ ಪರಿಸರದಲ್ಲಿನ ಕ್ರಾಂತಿಕಾರಕ ಘಟನೆಯನ್ನು ವರ್ಣಿಸುವಲ್ಲಿ ಅಲಂಕಾರಗಳ ಪರಿಭಾಷೆಯನ್ನು ಉಪಯೋಗಿಸಿಕೊಂಡಿರುವರು.

ಶಿವನ ಕುದುರೆಯನೇರಿ ಶ್ರಾವಣದ ಹಸರಾಣಿ
ಹೂಗಣ್ಣರೆರೆದಾಡಿ ಕುಣಿಯವೊಲು
ನನ್ನ ಚಿತ್ರಕಶಕ್ತಿ ಉತ್ಪ್ರೇಕ್ಷೆಯನ್ನೇರಿ
ಬಣ್ಣ ಬಣ್ಣದ ಬಣ್ಣನೆಗೆ ಒಲಿದಿತು.

ಯಾವುದಕೆ ಯಾವುದು ಸರಿದೊರೆಯೆನ್ನುತ
ತನ್ನ ಗೆರೆಬಣ್ಣಗಳನ್ನೊರೆ ಹಚ್ಚಿತು
ಮನದಲ್ಲಿ ಮೂಲೋಕ ರಚಿಸುವ ಊಹೆಯು
ತನ್ನ ಚಿಂತನದಲ್ಲಿ ತಾ ಮುಳುಗಿತು.

ಕೊಟ್ಟಿದ್ದೆ ರೂಪವು, ಇಟ್ಟಿದ್ದೆ ನಾಮವು
ಕಟ್ಟಿದ್ದೆ ಹುರುಳೆಂಬ ಮದದೊಳಿರೆ
ಬ್ರಹ್ಮಪಟ್ಟವನೇರಿ ರೂಪಕಶಕ್ತಿಯು
ಸೃಷ್ಟಿಯನೆಳದಿತು ದೃಷ್ಟಿಯೊಳೆ.

ಇಲ್ಲಿ ಚಿತ್ರಕ ಶಕ್ತಿ, ರೂಪಕ ಶಕ್ತಿ, ವಿಶಿಷ್ಟ ಆವಿಷ್ಕಾರಗಳೆನಿಸಿರುವ ಉಪಮೆ ರೂಪಕಗಳ ಸ್ಪಷ್ಟ ಉಲ್ಲೇಖಗಳಿವೆ. 'ಸೃಷ್ಟಿಯನಳೆದಿತು ದೃಷ್ಟಿಯೊಳೆ' ಸಾಲಿನಲ್ಲಿ ಪ್ರತಿಮಾ ವ್ಯಾಪಾರದ ಸ್ಪಷ್ಟ ಸೂಚನೆ ಇರುವುದನ್ನು ಗಮನಿಸಬಹುದು. ಇದರ ಜೊತೆಗೆ ನಾಮರೂಪ ಸೃಷ್ಟಿ ದೃಷ್ಟಿಯಂತ ತಾತ್ವಿಕ ಕಲ್ಪನೆಗಳಿರುವುದನ್ನು ಕಾಣಬಹುದು.

ಬೇಂದ್ರೆಯವರಿಗೆ ಹೆಚ್ಚು ಆಸಕ್ತಿ ಇರುವುದೇ ಪ್ರತಿಮೆ-ರೂಪಕಗಳಲ್ಲಿ ಅವರ ಸಾಕಷ್ಟು ಕಾವ್ಯಗಳಲ್ಲಿ ಪ್ರತಿಮೆ ರೂಪಕಗಳ ಬಳಕೆಯನ್ನು ಕಾಣುತ್ತೇವೆ. ಈ ಎರಡೂ ಅಲಂಕಾರಗಳು ಸೌಂದರ್ಯವನ್ನು ಹೆಚ್ಚುಸುವುದರೊಂದಿಗೆ ಸಂಬಂಧಗಳನ್ನು ಜೋಡಿಸುವ, ಅರ್ಥಗಳನ್ನು ಕಲ್ಪಿಸುವ ವಿಧಾನಗಳೂ ಆಗಿವೆ. 'ಪ್ರತಿಮೆಗಳು ನಮಗೆ ದಾನವಾಗಿ ಬರಬೇಕು.

ಉದ್ದೇಶಪೂರ್ವಕವಾಗಿ ನಾವು ಅವುಗಳನ್ನು ಆಯ್ದುಕೊಳ್ಳುವುದು ಸಾಧ್ಯವಿಲ್ಲ' ಎಂದು ಡಬ್ಲ್ಯು.ಬಿ.ಯೇಟ್ಸ್ ಹೇಳಿದಂತೆ ಬೇಂದ್ರೆಯವರ ಕಾವ್ಯಗಳಲ್ಲಿ ಪ್ರತಿಮೆ ರೂಪಕಗಳು ದಾನವಾಗಿ ಬಂದವುಗಳೇ ಆಗಿವೆ.

ಸಖೀಗೀತದ ಮಾಯಕಿನ್ನರಿಯಲ್ಲಿ ಪ್ರತಿಮೆಗಳ ಮಹಾಪೂರವೇ ಅಡಗಿದೆ. ನಲ್ಲ-ನಲ್ಲೆಯರ ಗುಜುಗುಜುವಿನಿಂದ ಹಿಡಿದು ನಾದದ ವೀಣೆಯ ಸಂಗೀತದವರೆಗೂ ಹಬ್ಬಿದೆ. ಲೌಕಿಕದ ಪ್ರತಿಮೆಗಳಿಂದ ಅಲೌಕಿಕದ ಪ್ರತಿಮೆಗಳವರೆಗೆ ವಿಸ್ತಾರವಾಗಿ ಹಬ್ಬಿಕೊಂಡಿದೆ. 'ನಾದದ ನದಿ' ಬಸಿರ ಹೂ ಯಾತನೆಯಂತ ಪ್ರತಿಮೆಗಳು ಬೇಂದ್ರೆಯವರ ಪ್ರತಿಭೆಗೆ ಕನ್ನಡಿ ಹಿಡಿದಂತೆ ರಾರಾಜಿಸಿ ಹೇಳುತ್ತಿವೆ. ಬೇಂದ್ರೆಯವರಿಗೆ ರೂಪಕ ಒಂದು ಅಲಂಕಾರ ಮಾತ್ರ ಆಗಿರದೆ, ಗ್ರಹಿಕೆ ಹಾಗೂ ಅಭಿವ್ಯಕ್ತಿಯ ಮಾಧ್ಯಮ ಆಗಿತ್ತು. ರೂಪಕ ಚಕ್ರವರ್ತಿಯಾದ ಕುಮಾರವ್ಯಾಸನನ್ನು ಹೆಚ್ಚಾಗಿ ಮೆಚ್ಚಿಕೊಂಡಿದ್ದ ಅವರು, ತಮ್ಮ ಕಾವ್ಯ ಪ್ರಯೋಗದಲ್ಲಿ ತಮ್ಮದೇ ಆದ ಶೈಲಿಯನ್ನು ಬಳಸಿಕೊಂಡರು. ರೂಪಕಗಳ ಮೂಲಕ ಅಪೂರ್ವವಾದ ವಸ್ತುಗಳನ್ನು ನಿರ್ಮಿಸಿರುವ ಬೇಂದ್ರೆಯವರು ಕಾವ್ಯಕ್ಕೆ ತಕ್ಕ ಅರ್ಥ ಕೊಡುವಂತ ಅಲಂಕಾರಗಳನ್ನು ಬಳಸಿಕೊಂಡಿದ್ದಾರೆ.

ಬೇಂದ್ರೆಯವರ ಕಾವ್ಯಗಳಲ್ಲಿ ರಸದ ಪ್ರತೀಕ ಕೇಂದ್ರ ಸ್ಥಾನದಲ್ಲಿರುವುದನ್ನು ಕಾಣಬಹುದು. ಸಖೀಗೀತದ ನಾಯಕ ಜೇನನ್ನು ಅಥವಾ ಮಧುವನ್ನು ಅರಸುತ್ತಾ ಬಳಲುವಂತ ಸನ್ನಿವೇಶಗಳೇ ಕಾಣುವುದು 'ಮೇಘದೂತ' ದಲ್ಲಿಯು ಯಕ್ಷ-ಯಕ್ಷಿಗೋಸ್ಕರ ಮಧುವನ್ನು ಬಯಸುತ್ತಾ ಪರಿತಪಿಸುತ್ತಾನೆ. ಈ ಜೇನಿನ ಹುಟ್ಟನ್ನು ವರ್ಣಿಸಲು ಕವಿ ಯಥೇಚ್ಛವಾದ ಪ್ರತಿಮೆ ರೂಪಕಗಳನ್ನು ಬಳಸಿಕೊಂಡಿದ್ದಾರೆ. ನಿದ್ದೆ ಎಂಬ ಪದ್ಯವು ಒಂದು ರೂಪಕವಾಗಿದ್ದು ಅದರ ವಿವಿಧ ಆಯಾಮಗಳನ್ನು ನಿದ್ದೆ ಕವನದಲ್ಲಿ ವರ್ಣಿಸಲಾಗಿದೆ. 'ನಿದ್ದೆ' ಎಂಬುದು ಸಂಸಾರ ಸಾರವನ್ನು ಹೀರುವಂತ ಜಿಗಣೆ ಇದ್ದಂತೆ ನಿದ್ದೆಯೆಂದರೆ ಕಣ್ಣುಕಟ್ಟು ಮಾಡುವ ಮೋಡಿ ಎಂದು ವಿವಿಧ ಪ್ರಕಾರವಾಗಿ ನಿದ್ದೆಯ ವೈಖರಿಗಳನ್ನು ವರ್ಣಿಸುತ್ತಲೇ ಪ್ರಶ್ನೆ ಮಾಡುವ ರೀತಿಯು ಇಲ್ಲಿದೆ. 'ರವರಿ' ಕವಿತೆಯಲ್ಲಿ 'ರವದಿ' ಪದ್ಯವು ರೂಪಕವಾಗಿದ್ದು ಬಾಲ್ಯ ಸ್ನೇಹಿತರೊಂದಿಗೆ ಕವಿ ನಡೆದ ಒಡನಾಟ ಸಲಿಗೆಯನ್ನು ಕುರಿತು ಹೇಳುವುದು.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ವಸ್ತು ಒಲುಮೆಯಾಗಿದ್ದು ಕವಿಯ ಬರವಣಿಗೆಗೆ ಬೇಕಾದ ಎಲ್ಲಾ ಪೂರಕ ವಸ್ತುಗಳು ದೊರೆತಿರುವವೆಂದೇ ಹೇಳಬಹುದು. ಸಖ-ಸಖಿಯರ ಅಗಲಿಕೆಯಿಂದ ಅವರಲ್ಲಿ ಉಂಟಾದ ವಿರಹ ವೇದನೆಯನ್ನು ಕವಿ ಪ್ರಕೃತಿಯ ವೈಚಿತ್ರಗಳೊಂದಿಗೆ ವರ್ಣಿಸಿದ್ದಾರೆ. ವಿರಹದ ವೇದನೆಯ ಅಭಿವ್ಯಕ್ತಿಯಲ್ಲಿ ಸಂದರ್ಭಕ್ಕೆ

ಸಂಬಂಧ ಕಲ್ಪಿಸುವಂತ ರೂಪಕ, ಪ್ರತಿಮೆಗಳು ಯಥೇಚ್ಛವಾಗಿ ಬಳಸಿಕೊಂಡಿರುವುದನ್ನು ಕಾಣಬಹುದು.

ಸಖೀಗೀತದ 'ಚಿಗುರಿಂಗಳ ಚೆಲುವಿ'ಯಲ್ಲಿ ಬಳಸಲಾಗಿರುವ ಪ್ರತಿಮಾಸೃಷ್ಟಿ ಬೇಂದ್ರೆಯವರ ಅಸಾಧಾರಣ ಸಾಮರ್ಥ್ಯವನ್ನು ವ್ಯಕ್ತಪಡಿಸುತ್ತದೆ. ಬೇಂದ್ರೆಯವರ ಪ್ರಣಯ ಕಾವ್ಯದಲ್ಲಿನ ಪ್ರತಿಮೆಗಳಲ್ಲಿ ಲೈಂಗಿಕಾನುಭವದ ಲೋಕದಿಂದ ಬಂದಂತವಾಗಿವೆ. ಅವರ ಪ್ರಣಯ ಕವಿತೆಗಳು ಪ್ರತಿಮೆಯ ಮಹಾಪೂರವನ್ನೇ ಸೃಷ್ಟಿಸಿ ಬಿಡುತ್ತವೆ.

# ಅಧ್ಯಾಯ – ಆರು

## ಸಖೀಗೀತ ಮತ್ತು ಮೇಘದೂತದಲ್ಲಿ ಸ್ತ್ರೀ

ವೇದ ಉಪನಿಷತ್ತುಗಳ ಕಾಲದಿಂದ ಇಂದಿನ ಕಾಲದವರೆಗೂ ಸ್ತ್ರೀಯ ಸ್ಥಾನಮಾನಗಳನ್ನು ಗಮನಿಸುತ್ತಾ ಹೋದರೆ ಇತಿಹಾಸದಲ್ಲೇ ಮರೆಯಲಾಗದಂತ ಘಟನೆಗಳು ನಡೆದು ಹೋಗಿವೆ. ಹಿಂದಿನ ಕಾಲದಲ್ಲಿ ಪುರುಷ ಪ್ರಧಾನ ಸಮಾಜವಾಗಿದ್ದು ಒಂದು ಕುಟುಂಬದ ಯಜಮಾನತ್ವವನು ಪುರುಷರೇ ಧರಿಸಿದ್ದರು. ಸಮಾಜದಲ್ಲಿ ಯಾವುದೇ ರೀತಿಯಿಂದಲೂ ಹೆಣ್ಣಿಗೆ ಗೌರವ, ಪ್ರೀತಿ ಇರಲಿಲ್ಲ. ಹೆಣ್ಣನ್ನು ಸೇವಕಿಯಂತೆ ಗುಲಾಮಳಂತೆ ಕಾಣುತ್ತಿದ್ದರು. ಯಾವುದೇ ಕ್ಷೇತ್ರದಲ್ಲಿ ಹೆಣ್ಣಿಗೆ ಅವಕಾಶ ಇರಲಿಲ್ಲ. ಮುಖ್ಯವಾಗಿ ಹೆಣ್ಣು ಗಂಡಿನ ಭೋಗ ವಸ್ತುವಾಗಿ ಪರಿಗಣಿಸಲಾಗಿತ್ತು. ಮನೆಯಲ್ಲಿ ಗೃಹಿಣಿಯಾಗಿ ಎಲ್ಲಾ ಕೆಲಸಗಳನ್ನು ತಾನೇ ಮಾಡಿ ಮಕ್ಕಳನ್ನು ಹೆರುವ ಯಂತ್ರದಿಂದ ಗಂಡನಿಗೆ ಸುಖ ನೀಡುವ ಭೋಗ, ವಿಲಾಸದ ವಸ್ತುವಾಗಿ ಆಕೆಯನ್ನು ಕಾಣಲಾಗಿತ್ತು. ಶಿಕ್ಷಣ, ವಿಜ್ಞಾನ, ಕಲೆ ಯಾವುದೇ ರೀತಿಯಿಂದಲೂ ಆಕೆಯನ್ನು ದೂರ ಹಿಡಲಾಗಿತ್ತು. ಕಾಲಾನಂತರದಲ್ಲಿ ಬದಲಾವಣೆಗಳು ಕಂಡು ಬಂದರೂ, ಅದು ಕ್ಷಣಿಕ ಮಾತ್ರವೇ ಆಗಿ ಪೂರ್ತಿಯಾದ ಕ್ರಾಂತಿ ಹೆಣ್ಣಿನ ಬಗ್ಗೆ ಕಂಡು ಬರಲಿಲ್ಲ. ಅಕ್ಕ ಮಹಾದೇವಿ, ಸಂಚಿ ಹೊನ್ನಮ್ಮ ಅಂತಹ ಕ್ರಾಂತಿಕಾರಿ ಮಹಿಳಾ ಕವಯಿತ್ರಿಯರು ಹೆಣ್ಣಿನ ಶೋಷಣೆಯನ್ನು ವಿರೋಧಿಸಿದರೂ ಅದಕ್ಕೆ ತಕ್ಕ ಮಾನ್ಯತೆ, ಪ್ರಾಮುಖ್ಯತೆ ಸಿಗಲಿಲ್ಲ. ಆಧುನಿಕ ಕಾಲಕ್ಕೆ ಕಾಲಿಡುತ್ತಾ ಬಂದಂತೆ ಸಂಸ್ಕೃತಿ ಸಂಪ್ರದಾಯಗಳ ಬದಲಾವಣೆಯೊಂದಿಗೆ ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ನೋಡುವ ದೃಷ್ಟಿಕೋನವೂ ಬದಲಾಗುತ್ತಾ ಬಂದಿತು. ನವೋದಯ ಕಾಲಕ್ಕೆ ಹೆಣ್ಣನ್ನು ಹೀನಾಯವಾಗಿ ಕಾಣುವ ಭಾವನೆ ಇಲ್ಲವಾದರೂ ಅದು ಸಂಪೂರ್ಣವಾಗಿ ಸಮಾಜದಿಂದ ದೂರವಾಗಲಿಲ್ಲ. ಇಂತಹ ಸಂದರ್ಭದಲ್ಲೇ ಬೇಂದ್ರೆಯವರು ಹೆಣ್ಣನ್ನು ಆದರ್ಶ ಸ್ತ್ರೀಯಾಗಿ ಚಿತ್ರಿಸಿ ಹೆಣ್ಣು–ಗಂಡಿನ ಸಂಬಂಧ ಸ್ನೇಹ, ಸಹಬಾಳ್ವೆಯ ಬಂಧದಲ್ಲಿ ಕಲೆ ಹಾಕಿದರು. ತಮ್ಮ ಕಾವ್ಯದಲ್ಲಿ ಮಾತ್ರ ಸ್ತ್ರೀಯನ್ನು ಗೌರವಿಸದೆ ತಮ್ಮ ವೈಯಕ್ತಿಕ ಜೀವನದಲ್ಲೂ ಸ್ತ್ರೀಯನ್ನು ಗೌರವಿಸಿದ್ದಾರೆ. ತನ್ನ ಹೆಂಡತಿಯನ್ನು ಸಖಿಯಾಗಿ ಕಂಡಿರುವ ಬೇಂದ್ರೆಯವರ ಮನೋದೃಷ್ಟಿ ಹೆಣ್ಣಿನ ಬಗ್ಗೆ ಅವರಿಗಿರುವ ಪ್ರೀತಿ, ಗೌರವಗಳನ್ನು ವ್ಯಕ್ತಿಪಡಿಸುತ್ತದೆ. ತಾಯಿಯಿಂದ ಸಖಿಯವರೆಗೂ ಹೆಣ್ಣಿನ ಬಗ್ಗೆ ವಿಶೇಷವಾದ ಕಾಳಜಿಯನ್ನು ತೋರಿಸಿದ್ದಾರೆ. ಹೆಣ್ಣಿನ ಬಗ್ಗೆ ಅವರಿಗಿದ್ದ ಪ್ರೀತಿ, ಗೌರವಗಳು ಅವರ ತಾಯಿಯ ಮಮತೆಯ ಫಲವೇ ಆಗಿದೆ. ಬೇಂದ್ರೆಯವರ ಬಾಲ್ಯ ಸ್ತ್ರೀ ಪೋಷಿತವಾಗಿದ್ದು ತಾಯಿಯೆ ಪ್ರತ್ಯಕ್ಷ ದೈವವೆಂದು ಭಾವಿಸಿದ್ದರು.

ಆ ತಾಯಿ ಮಾತಾಯಿ ಈ ಬಾಯಿ ತುತ್ತಲ್ಲ
ಅವಳನ್ನು ಸ್ತುತಿಸಲು ಎದೆ ಸಾಲದು

ಎಂದು ಹೇಳಿರುವ ಮಾತುಗಳಲ್ಲಿ ಬೇಂದ್ರೆಯವರು ತಾಯಿಯ ಬಗ್ಗೆ ತಳೆದಿದ್ದ ದಿವ್ಯ ಪ್ರೇಮ ಸ್ವರೂಪ ವ್ಯಕ್ತವಾಗುವುದು. ಬೇಂದ್ರೆಯವರು ಹುಟ್ಟಿ ಬೆಳೆದ ಸಂದರ್ಭದಲ್ಲಿ ಧಾರವಾಡದಲ್ಲಿ ಧಾರ್ಮಿಕ, ಸಾಂಸ್ಕೃತಿಕ, ರಾಷ್ಟ್ರೀಯ ಭಾವನೆಗಳು, ಜನಪದ ಹಾಡು, ಕುಣಿತಗಳು ಬದುಕಿನ ಒಂದು ಭಾಗದಂತಿದ್ದವು. ಇಂತಹ ಪರಿಸರದಲ್ಲಿ ಬೇಂದ್ರೆಯವರು ಎಲ್ಲಾವನ್ನು ತಮ್ಮ ವ್ಯಕ್ತಿತ್ವದೊಂದಿಗೆ ತಮ್ಮದಾಗಿಸಿಕೊಂಡು ಬೆಳೆದರು. ಬೇಂದ್ರೆಯವರು ಅಜ್ಜಿಯ ಮೊಮ್ಮಗನಾಗಿ, ತಾಯಿಯ ಪ್ರೀತಿಯ ಮಗನಾಗಿ, ಸಮುದಾಯಕ ಬಾಲಕನಾಗಿ ಬೆಳೆದರು, ಧಾರ್ಮಿಕತೆಯಲ್ಲಿ ಹೆಚ್ಚು ನಂಬಿಕೆಯನ್ನು ಇರಿಸಿಕೊಂಡಿದ್ದ ಅವರು ಶ್ರೀ ಅರವಿಂದ ಚಿಂತನೆಗಳನ್ನು ಮೈಗೂಡಿಸಿಕೊಳ್ಳುವದರೊಂದಿಗೆ ಅವರ ಶಿಷ್ಯರಾಗಿ ಬೆಳೆದರು. ಇವರಲ್ಲಿ ಧಾರ್ಮಿಕ ನಂಬಿಕೆ ಮತ್ತು ಕಾವ್ಯ ಚಿಂತನೆ ಬೆಳೆಸಿಕೊಳ್ಳಲು ಅವರ ತಾಯಿ ತುಂಬಾ ಪ್ರೇರಕಳಾಗಿದ್ದಳು. ಧಾರ್ಮಿಕ ಗ್ರಂಥಗಳನ್ನು ಓದಿ ಮಗನಿಗೆ ಹೇಳಿ ಅದನ್ನು ಬೇಂದ್ರೆಯವರು ಓದುವಂತೆ ಮಾಡಿದರು. ತಾಯಿ ಪ್ರೀತಿಯ ಸಂಪೂರ್ಣ ಪ್ರೇರಣೆ ಬೇಂದ್ರೆಯವರ ಮೇಲಿದ್ದ ಕಾರಣವೇ ಅವರು ಹೆಣ್ಣನ್ನು ಗೌರವ, ಪ್ರೀತಿಯಿಂದ ಕಾಣಲು ಸಾಧ್ಯವಾಯಿತೆನ್ನಬಹುದು. ತನ್ನ ತಾಯಿ ತನ್ನಿಂದ ದೂರವಾದ ಕ್ಷಣಗಳನ್ನು ನೆನೆಸಿಕೊಳ್ಳುತ್ತಾ

ಮೈಗೊಟ್ಟ ತಾಯಿಯು ಮೈ ಬಿಟ್ಟು ಹೋಗುವಳೇ ?
ಏನೇನೊ ಎಂದೆಂದು ನಾನತ್ತೆನು
ಮೈ ಮರೆತು, ಮೈ ಅರಿತು, ಮೈ ಬೆವೆತು, ಮನ ಬೆರೆತು
ಕಣ್ಣೀರಧಾರೆಯಲೆ ನೀರ್ಬಿಟ್ಟೆನು

ತನ್ನಿಂದ ಮರೆಯಾದ ತಾಯಿಯು ಎಲ್ಲೂ ಹೋಗಿಲ್ಲ, ತನ್ನ ಮನ, ಮೈ, ಮನಸ್ಸಿನಲ್ಲಿಯೆ ಶಾಶ್ವತವಾಗಿ ಇರುತ್ತಾಳೆ ಎಂಬುದನ್ನು ಭಾವ ಪೂರ್ತಿಯಾಗಿ ಹೇಳಿಕೊಂಡಿದ್ದಾರೆ. ಜೀವನದಲ್ಲಿ ಅನೇಕ ಆದರ್ಶಗಳಿರುತ್ತವೆ ಅದರಲ್ಲಿ ಪ್ರೇಮ, ಒಲುಮೆ ಎಂಬುದು ಪ್ರಮುಖವಾದದ್ದು. ಪ್ರಿಯವಾದ, ವಸ್ತುಗಳು, ವ್ಯಕ್ತಿಗಳು, ಸಂಗತಿಗಳು ಯಾವಾಗಲೂ ಅಪ್ಯಾಯಮಾನವಾಗಿ ಕಂಡು ಬರುತ್ತವೆ. ಪ್ರೇಮದ ಫಲವೇ ಗಂಡು-ಹೆಣ್ಣಿನ, ಪ್ರಿಯಕರ-ಪ್ರಿಯತಮೆಯ, ನಾಯಕ-ನಾಯಕಿಯರ, ಪತಿ-ಪತ್ನಿಯರ ಸಂಬಂಧ ನಿರ್ಮಾಣವಾಗುವುದು, ಇವರ ಎಲ್ಲಾ ಪ್ರಣಯ ಗೀತೆಗಳಲ್ಲಿಯೂ ಒಂದು ಉತ್ತಮವಾದ ಆದರ್ಶ ಪ್ರೇಮ ನಿರ್ಮಾಣವಾಗಿದೆ. ಮಾನವನ ದೇಹ, ಕಾಮ, ಕ್ರೋಧ, ಮದ,

ಮತ್ಸ್ಯಗಳಿಂದ ಆವರಿಸಿಕೊಂಡಿರುವಂತದ್ದು, ವಿಕೃತ ಕಾಮವನ್ನು ನಾಶ ಮಾಡಲು ಒಲುಮೆ ಎಂಬ ಸಾಧನ ಅವಶ್ಯಕವಾಗಿ ಬೇಕಾಗಿರುವಂತದ್ದು ಇವರ ಪ್ರೇಮ ಗೀತೆಗಳೆಲ್ಲ ಪ್ರೇಮ ತತ್ವದ ಮೌಲ್ಯಗಳನ್ನು ತಿಳಿಸಿಕೊಡುವಂತವೆ ಆಗಿವೆ. ಬಯಸಿದ್ದು ಸಿಗದಿದ್ದಾಗ ಅಗಲಿಕೆ, ವಿರಹದ ತಾಪಗಳು ಉಂಟಾಗುತ್ತವೆ. ಈ ತಾಪವು ಬೆಂದು ಪರಿಪಕ್ವಗೊಂಡು ಸುಪ್ರೇಮವಾಗುವ ರೀತಿಯನ್ನು ತಮ್ಮ ಕಾವ್ಯಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಪ್ರೇಮ, ಪ್ರಣಯಗಳಲ್ಲಿ ಪ್ರಮುಖವಾಗಿ ಗಂಡು ಹೆಣ್ಣಿನ ನಡುವೆ ಆಕರ್ಷಣ-ವಿಕರ್ಷಣ ಶಕ್ತಿ ಕೆಲಸ ಮಾಡುತ್ತದೆ. ಇಂತಹ ಸಂದರ್ಭದಲ್ಲಿ ಜಗಳ, ಅಸೂಯೆ, ಅಹಂಕಾರ, ಕೋಪ, ತಾಪ ಮೊದಲಾದ ಸಂಚಾರಿ ಭಾವಗಳು ಓಡಾಡುತ್ತವೆ. ಆದ್ದರಿಂದ ಒಲವು ಬುದ್ಧಿ ಮತ್ತು ಯುಕ್ತ ಭಾವನೆಯಿಂದ ಕೂಡಿರಬೇಕು ಎಂದು ವಾಮನ ಬೇಂದ್ರೆಯವರು ಅಭಿಪ್ರಾಯ ಪಡುವಂತೆ ಒಲವು ಬುದ್ಧಿ ಮತ್ತು ಯುಕ್ತ ಪ್ರಮಾಣವಾಗಿದ್ದಾಗ ಪ್ರೀತಿಯಲ್ಲಿ ಯಾವುದೇ ಕುಂದು ಕೊರತೆಗಳು ಕಾಣುವುದಿಲ್ಲ.

ನವೋದಯ ಕಾಲದ ಕವಿಗಳ ಸಾಲಿನಲ್ಲಿ ಬೇಂದ್ರೆಯವರ ಹೆಸರು ಸದಾ ಚಿರಾಯುವಾಗಿದೆ. ಇದಕ್ಕೆ ಅವರ ವ್ಯಕ್ತಿತ್ವವೇ ಕಾರಣ. ಅವರ ಆದರ್ಶವಾದ ಮತ್ತು ಮಾನವೀಯ ಮೌಲ್ಯಗಳಿಂದ ಜನರ ಮನಸ್ಸನ್ನು ಸೂರೆಗೊಂಡಿದ್ದಾರೆ. ಸ್ತ್ರೀಶಕ್ತಿಯ ವಿವಿಧ ಮುಖಗಳನ್ನು ಬೇಂದ್ರೆಯವರ ಕಾವ್ಯದಲ್ಲಿ ಕಾಣಬಹುದು. ಬಾಲ್ಯದಿಂದಲೂ ಹೆಣ್ಣಿನ ಬಗ್ಗೆ ಅಪಾರವಾದ ಪ್ರೀತಿ, ಗೌರವಗಳನ್ನು ಇಟ್ಟುಕೊಂಡಿದ್ದ ಬೇಂದ್ರೆಯವರು ಕೊನೆಯವರೆಗೂ ಹೆಣ್ಣಿನ ಬಗ್ಗೆ ಅದೇ ಭಾವನೆಗಳನ್ನು ಇಟ್ಟುಕೊಂಡಿದ್ದರು. ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡ ಬೇಂದ್ರೆಯವರು ಅಜ್ಜಿ ಮತ್ತು ತಾಯಿಯ ಆಸರರೆಯಲ್ಲಿಯೇ ಬೆಳೆದರು. ಮಾತೃ ವಾತ್ಸಲ್ಯದಲ್ಲಿ ಅವರ ಕಿತ್ತು ತಿನ್ನುವ ಬಡತನ ಅಷ್ಟು ದೊಡ್ಡದಾಗಿ ಕಾಣಲಿಲ್ಲ. ಅಂಬಿಕಾತನಯದತ್ತ ಎಂಬ ಅವರ ಕಾವ್ಯ ನಾಮವು ತಾಯಿಯ ಬಗ್ಗೆ ಅವರಿಗಿದ್ದ, ಕಾಳಜಿ ಪ್ರೀತಿಯನ್ನು ತೋರಿಸುವುದು. ಬೇಂದ್ರೆಯವರ ಎಲ್ಲಾ ಕಾವ್ಯಗಳಲ್ಲೂ ಸ್ತ್ರೀಗೆ ವಿಶೇಷವಾದ ಸ್ಥಾನಗಳನ್ನು ಕೊಟ್ಟು ಆಕೆಯ ಪ್ರೀತಿ, ಸ್ನೇಹವನ್ನು ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ನಿಟ್ಟಿನಲ್ಲಿ 'ಸಖೀಗೀತ' ಮತ್ತು 'ಕನ್ನಡ ಮೇಘದೂತ' ಕಾವ್ಯಗಳಲ್ಲಿ 'ಸ್ತ್ರೀ' ಕಲ್ಪನೆಯು ವಿಶೇಷವಾಗಿ ಮೂಡಿ ಬಂದಿದೆ. ಕವಿಯ ಬದುಕಿನ ಸರ್ವಸ್ವವಾಗಿ ಸ್ತ್ರೀ ಅಲ್ಲಿ ಮೆರೆಯುತ್ತಾಳೆ. ಸತಿಯನ್ನು ಸಖಿಯಾಗಿ ಕಂಡಿರುವ ಕವಿಯ ಮನಸ್ಸು ತಾಯಿಯ ಮನಸ್ಸಿನಷ್ಟೆ ವಿಶಾಲವಾಗಿ ತೋರುತ್ತದೆ.

'ಸಖೀಗೀತ' ಮತ್ತು 'ಮೇಘದೂತ' ವಸ್ತು ಪ್ರೀತಿ ಅಥವಾ ವಿರಹವಾಗಿದ್ದು ಅದು ಸುಪ್ರೇಮವಾಗುವ ರೀತಿಯನ್ನು ಕವಿ ಹೇಳಿದ್ದಾರೆ. ಪ್ರೀತಿ ಎಂಬುದು ಗಂಡು-ಹೆಣ್ಣಿಗೆ

ಯೌವನಾವಸ್ಥೆಯಲ್ಲಿ ಚಿಗುರೊಡೆಯುವ ಸಹಜವಾದ ಬಯಕೆ. ಈ ಪ್ರೇಮವು ಬರಿಯ ಕಾಮವಾಗದೇ ಸ್ವಾರ್ಥ ರಹಿತ ಪ್ರೇಮವಾದಾಗ ಅಲ್ಲಿ ಒಂದು ಗಟ್ಟಿಯಾದ ಬಂಧವು ಶಾಶ್ವತವಾಗಿ ಉಳಿಯಲು ಸಾಧ್ಯ. ಈ ನಿಸ್ವಾರ್ಥ ಪ್ರೀತಿಯ ಆಳವನ್ನು ದಾಂಪತ್ಯ ಜೀವನದಲ್ಲಿ ಹರಡಿಕೊಂಡಿದ್ದ ಬಗೆಯನ್ನು ಕವಿ ಚಿತ್ರಿಸಿದ್ದಾರೆ. ಅವರ ಸ್ತ್ರೀತತ್ವದ ಗುಣಗಳು ಕಾವ್ಯವನ್ನೆಲ್ಲ ಆವರಿಸಿರುವುದರಿಂದ ಇಂದಿಗೂ ಕಾವ್ಯ ರಸಿಕರ ಮನಸ್ಸನ್ನು ಸೂರೆಗೊಳ್ಳುವ ಕಾವ್ಯಗಳಾಗಿವೆ. ಸರ್ವ ಕಾಲಕ್ಕೂ ಬೇಕಾಗುವಂತ ಕಾವ್ಯಗಳಾಗಿ ರೂಪುಗೊಂಡಿದೆ.

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು

ಸಾಲುಗಳಲ್ಲಿ ಬಡವರ ಬದುಕು ಸಾಗುವುದು ಒಲವೆಂಬ ದೋಣಿಯ ಮೇಲೆ ಆ ದೋಣಿಯ ಎರಡೂ ಬದಿಗಳಲ್ಲಿ ಗಂಡ-ಹೆಂಡತಿ ಕುಳಿತು ಸಮನಾಗಿ ಅದು ಮುಂದೆ ಸಾಗಲು ಎರಡೂ ಕೈಗಳು ಚಾಚಿವೆ ಎಂಬುದು ಸ್ಪಷ್ಟವಾಗುತ್ತದೆ. ಬೇಂದ್ರೆಯವರ ಬದುಕಿನಲ್ಲಿ ತನ್ನ ಸತಿ ಅಥವಾ ಸಖಿ ಹೆಜ್ಜೆ ಹೆಜ್ಜೆಗೂ ತುಂಬ ಪ್ರಮುಖವಾಗಿ ಕಂಡು ಬರುವುದನ್ನು ತಮ್ಮ ಕವನಗಳಲ್ಲಿ ಕಾಣುತ್ತೇವೆ. 'ಸಖೀಗೀತ' ಕಾವ್ಯವು ಪ್ರಾರಂಭವಾಗುವುದು ಮಧುವೆಯ ದಿನದ ಸಂಜೆಯ ಸ್ಮೃತಿಯಿಂದ ಗೀತವು ಪ್ರಾರಂಭವಾಗುವುದು. ಪ್ರಥಮ ದಿನವೇ ವಿಧಿ ತಂದ ವಧುವನ್ನು ಸ್ನೇಹಿತಳನ್ನಾಗಿಸಿಕೊಂಡು ಆಕೆಯನ್ನು ಚಿತ್ರಿಸಿಕೊಂಡಿರುವ ರೀತಿ ಮಧುರವಾಗಿ ಮೂಡಿಬಂದಿದೆ.

'ಮುತ್ತಿಗು ಮಿಗಿಲಾಗಿ ಹೂವೀ ಗು ಹಿಂದಾಗಿ
ಬೆವರ್ಹನಿ ಬಾಸಿಂಗ ತುಳುಕುತಿದೆ
ನತ್ತನುನಾಚಿಸಿ ಬೆವರಿನ ಹನಿಯೊಂದು
ಮೂಗು ಬಟ್ಟನ ಅಂದ ಮಿನುಗುತಿರೆ'

ತನ್ನ ಪ್ರಿಯ ಸಖಿಯು ಭೌತಿಕ ಒಡವೆಗಳಿಗಿಂತ ತನ್ನ ಬದುಕಿನ ವಾಸ್ತವ ರೀತಿಯಲ್ಲೇ ಪ್ರಕೃತಿ ಸಹಜವಾದ ಸೌಂದರ್ಯದಲ್ಲಿ ಮಿನುಗುತ್ತಿರುವುದನ್ನು ಕಲ್ಪಿಸಿಕೊಳ್ಳಾಗಿದೆ.

ವಿವಾಹದ ನಂತರ ಪತಿ-ಪತ್ನಿಯರ ಪ್ರಣಯ ಬದುಕಿನ ಮರೆಯಲಾದ ಘಟನೆಗಳೆಂಬುದನ್ನು

'ನೀನು ದೊಡ್ಡವಳಾದೆ ಮೈಸಲಿಗೆ ಬೆಳೆಸಿದೆ
ಏಕಾಂತಕೆಳೆಸಿದೆ ಎಳೆ-ಕೆಳದಿಯೆ
ಏನು ಸಂಭ್ರಮವದು ! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆ ಬೆಳೆದವೇ'

ಮನಸ್ಸುಗಳು ಬೆರೆತು ಒಂದಾದ ಪತಿ-ಪತ್ನಿಯರ ಬಾಂದವ್ಯ ಚಿಗುರುವುದು ಒಬ್ಬರನೊಬ್ಬರು ಅರ್ಥಮಾಡಿಕೊಂಡು ನಡೆದಾಗ ಈ ಸಾಮರಸ್ಯ ಗುಣವು ಇವರಿಬ್ಬರಲ್ಲೂ ಕಾಣಬಹುದು.

'ಸಖೀಗೀತ' ದ ಪ್ರೇಮ ಪಾಕವು ಎಲ್ಲಾ ಕಡೆ ನವ್ಯವಾಗಿ-ಭವ್ಯವಾಗಿ ಚೆಲ್ಲಿರುವುದಕ್ಕೆ ಕಾರಣ ಬೇಂದ್ರೆಯವರಿಗೆ ಸತಿ-ಸಖಿಯಾಗಿ ಕಂಡಿರುವುದೇ ಆಗಿದೆ. ಡಾ.ಕೆ.ಎಸ್.ಶರ್ಮಾರವರು ಪ್ರಕಾಶಕರ ಪ್ರಸ್ತಾವನೆಯಲ್ಲಿ 'ವೈವಾಹಿಕ ಜೀವನದಲ್ಲಿ ಪತ್ನಿಯನ್ನು ಸಖಿಯಾಗಿ ಸ್ವೀಕರಿಸುವ ಮನೋಭಾವ ಇಲ್ಲಿಯ ನವ್ಯವೆ-ಭವ್ಯತೆ' ಎಂದು ಹೇಳಿದ್ದಾರೆ. ಹೆಣ್ಣಿನ ಮನಸ್ಸನ್ನು ಅರಿತು ಆಕೆಯ ಜೊತೆಗೂಡಿ ಕೊನೆಯವರೆಗೂ ಮನಸ್ಸಿನಲ್ಲೇ ಇಟ್ಟು ಪೂಜಿಸಿದವರು ಬೇಂದ್ರೆಯವರು. ಗಂಡ-ಹೆಂಡತಿಯ ಬಾಂಧವ್ಯದ ನಂಟು ಯಾರು ಅರಿಯದ ಗಂಟು ಎಂಬುದನ್ನು 'ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ ?' ಎಂದು ಹೇಳಿದ್ದಾರೆ. ಸಖಿ ಎಂಬುವಳು ಬರಿಯ ಜೊತೆಗಾತಿಯಲ್ಲ. ಅವಳು ಬೌದ್ಧಿಕ ಮತ್ತು ಆಧ್ಯಾತ್ಮಿಕ ಜೊತೆಗಾತಿ ಎಂಬುದನ್ನು ಶೋಧಿಸಿದ್ದಾರೆ. ಸಂಪ್ರಾದಾಯವನ್ನು ಸಂಪೂರ್ಣವಾಗಿ ಅರಗಿಸಿಕೊಂಡವರು. ಬೇಂದ್ರೆಯವರು ಸಾಂಪ್ರದಾಯಿಕ ಕವಿಯಾಗಿ ಉಳಿಯದೇ ಹೊಸದೊಂದು ಪರಂಪರೆಯನ್ನು ಸೃಷ್ಟಿಸಿದರು. ಹೆಣ್ಣಿನ ಮನಸ್ಸನ್ನು ಅರ್ಥಮಾಡಿಕೊಂಡು ಹೆಣ್ಣಿನ ಮನಸ್ಸಿಗೆ ಸ್ಪಂದಿಸಿ ಅದರ ಜೊತೆ ಮಾತಾಡುವ ಕವನಗಳನ್ನು ಬೇಂದ್ರೆ ರಚಿಸಿದ್ದಾರೆ.

ಮೌನದಲ್ಲಿಯು ಕೂಡ ಮಾತಿನ ಧ್ವನಿಯಿರಲಿ
ಮೂಕ ಮೌನವು ಒಂದು ಶಾಪದೊಲು
ತಾಪವ ಕೊಡುವುದು, ತಾ ಪರಿಹರಿಸದು
ಜೀವಯಾತನೆಯನ್ನು ಅದು ಎಂದಿಗು

ಮಾತಿನಲ್ಲಿರುವಂಥ ಮೌನದ ಧ್ವನಿಯಿಂದ
ವಿಹ್ವಲತೆ ಬಳೆಯುವುದಿಬ್ಬರಲಿ
ಇಬ್ಬರ ಮನವಾಗ ಇಬ್ಬಗೆಯಾಗುವುದು
ಒಬ್ಬರೂ ಸುಖವಿಲ್ಲ ಬದುಕಿನಲಿ

ಮೌನವಾದ ಸಖಿಯ ಮನಸ್ಸನ್ನು ಮಾತಾಡಿಸುತ್ತಾ ಕೋಪ-ತಾಪಗಳು ದಾಂಪತ್ಯ ಜೀವನದಲ್ಲಿ ಕಂದರ ಮೂಡಿಸುವಂತದ್ದು, ಇದರಿಂದ ಇಬ್ಬರಿಗೂ ಸುಖವಿಲ್ಲ ಯಾತನೆಯಿಂದ

ಬದುಕು ಪರಿತಪಿಸುವುದು, ಅಗಲಿರುವುದು ಇಬ್ಬರಿಗೂ ಒಳ್ಳೆಯದಲ್ಲ ಎಂಬುದನ್ನು ಹೇಳಿದ್ದಾರೆ.

ಸಂಸಾರ ನೌಕೆಯಲಿ ತಾನು ನೀನು ಎಂಬ ಬೇದ ಭಾವವಿಲ್ಲದೆ ಜೀವನ ಸಮವಾಗಿ ಸಾಗುತ್ತಿದೆ ಎಂದೆನುತಾ.

ಬಾನಿನಿಂದ ಬಾನಿಗೆ ಹಾಡಿದ ತಾನೊಂದು
ಸಖಿ–ಸಖಿ–ಸಖಿಯೆಂದು ಕೂಗುತಿದೆ
ನಾನೂ–ನೀನೂ ಸಖ–ಸಖಿ ಸಮ–ಸುಖಿ
ಎಂದೆನುತಾ ಮುಂದಕೆ ಹೋಗುತಿದೆ

ಸಖ–ಸಖಿಯರು 'ಸಮ–ಸುಖಿ'ಗಳಂತೆ ನಿರಂತರವಾಗಿ ಸಾಗುತ್ತಿರುವರು. 'ಸಖಿ' ಎನ್ನುವ ಪದ ತನ್ನ ಬಾಳಿನುದ್ದಕ್ಕೂ ಎಡೆ ಬಿಡದೆ ತನ್ನನ್ನು ಹಿಂಬಾಲಿಸಿ ಬರುತ್ತಿದೆ. ಬದುಕಿನ ಸಮಭಾಗಿಯಾಗಿ ಅರ್ಧಾಂಗಿಯಾಗಿ ಸಖಿ ತನ್ನ ಬದುಕನ್ನು ಆವರಿಸಿಕೊಂಡಿದ್ದಾಳೆ ಎಂಬುದು ಈ ನುಡಿಗಳಿಂದ ವ್ಯಕ್ತವಾಗುವುದು.

ಸಖಿ ! ನಮ್ಮ ಸಖ್ಯದ ಆಖ್ಯಾನ ಕಟು–ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟ
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ

ಸಖೀಗೀತ ಕಟುಮಧುರ ಆಖ್ಯಾನವಾಗಿ ಕರುಳಿನ ಸಮಸ್ಯೆಗಳನ್ನು ನಯವಾಗಿ ಬಿಡಿಸಿ ವ್ಯವದಾನದಿಂದ ಪರಿಸ್ಥಿತಿಯ ಅರಿತು, ಮನಸ್ಸನ್ನು ಅರಿತು ನನ್ನ ಬದುಕಿನ ಸಖಿಯಾಗಿ ನಡೆ ಎಂದು ಇಲ್ಲಿ ಸಖ–ಸಖಿಯನ್ನು ಕುರಿತು ಹೇಳಲಾಗಿದೆ.

ಬೇಂದ್ರೆಯವರು ಜಗತ್ತಿನ ಸೌಂದರ್ಯವನ್ನು, ನಮ್ಮ ದಿನ ನಿತ್ಯದ ಬದುಕಿನಲ್ಲಿ ಸುಪ್ತವಾಗಿರುವ ಚೆಲುವನ್ನು ಅಗೆದು, ತೆಗೆದು ಅದನ್ನು ಗಾಢವಾಗಿ ಪ್ರೀತಿಸುವಂತೆ ಮಾಡುತ್ತಾರೆ. ಸಪ್ಪೆಯಾಗಿರುವ ಬದುಕು ಸಿಹಿಯಾಗಿ ಮಾಡಿಕೊಳ್ಳುವ ದಾರಿ ತಮ್ಮ–ತಮ್ಮ ಕೈಯಲ್ಲೇ ಇರುವುದು. ಬದುಕು ಒಂದು ಗೋಳು, ಸಂಸಾರ ಒಂದು ಯಾತನೆ ಎಂದು ತಿಳಿಯದೆ. ಬದುಕು ಒಂದು ಚೆಲುವು, ಸೌಂದರ್ಯ ತುಂಬಿದ ಸೆಲೆ ಎಂದು ಭಾವಿಸಿದಾಗ ಬದುಕಿನ ಸಾಫಲ್ಯತೆ ಕಾಣಲು ಸಾಧ್ಯ ಎಂಬುದು ಅವರ ನುಡಿಗಳಲ್ಲಿ ವ್ಯಕ್ತವಾಗುವುದು.

ನೀನಾಗು ಕಿನ್ನರಿ, ನಾನಿ ಕಿನ್ನರನಾಗಿ
ಬಾರಿಸಿ ನೋಡುವೆ ಸಂಧಾನಾ
ನೀ ದೇವ ಗಾಂಧಾರಿ ದೇವ ಗಂಧರ್ವನಾ
ದನಿ ಎತ್ತಿ ಹೇಳುವೆ ನನ್ನ ಗಾನಾ

'ಸಖಿ'ಯನ್ನು ಬದುಕಿನ ದಾರಿಗೆ ಪೋಷಕವಾಗುವ ಪ್ರೀತಿಯ ಅಮೃತವಾಗಿ ಭಾವಿಸಿ ಒಲವಿನ ಪ್ರತೀಕವಾದ ಸಖಿಯನ್ನು ಬಾಳಿನ ದೀಪವಾಗಿ ಆರಿಸಿದ್ದಾರೆ. ಮಧುರವಾದ ಬದುಕಿನ ರಹಸ್ಯಗಳನ್ನೆಲ್ಲಾ ಸಖ್ಯದ ನಿಲುವಿನಲ್ಲಿ ತೆರೆದಿಟ್ಟಿದ್ದಾರೆ.

ಬರುವದೇನೆ ನೆಪ್ಪಿಗೆ
ಕೂಡಿಕೊಂದ ತಪ್ಪಿಗೆ
ಏನೋ ಏನೋ ನೂತೆವು
ಬದುಕಿನೆಳೆಗೆ ಜೋತೆವು

ಸತಿಯನ್ನು ಸಖಿಯಾಗಿ ಕಾಣುವುದು ಸಾಮಾನ್ಯದ ವಿಷಯವಲ್ಲ. ಸಂಗಾತಿಯನ್ನು ಸಖಿಯಾಗಿ ಕಂಡಾಗ ಬಾಳಿನ ನೋವು ನಲಿವುಗಳನ್ನು ಸರಿ ಸಮನಾಗಿ ಹಂಚಿ ನಡೆಯಲು ಸಾಧ್ಯ. ಕಷ್ಟ-ಸುಖಗಳಲ್ಲಿ ಭಾಗಿಯಾಗುವ ಹೆಂಡತಿಯನ್ನು ಸ್ನೇಹಿತೆಯಾಗಿ ಭಾವಿಸಿ ಪ್ರೇಮದ ಸುಧೆಯನ್ನು ಆಕೆಯಲ್ಲಿ ಕಂಡಿರುವದು ಬೇಂದ್ರೆಯವರ ಮೌಲೀಕತ್ವಕ್ಕೆ ಶೋಭೆಯುಂಟು ಮಾಡಿದೆ. ಸಾಮಾನ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯ ವೈಯಕ್ತಿಕ ವಿಷಯಗಳನ್ನು ತಂದೆ-ತಾಯಿ, ಬಂಧುಗಳಿಗಿಂತ ಗಂಡ-ಹೆಂಡತಿಯರಲ್ಲಿ ಹಂಚಿಕೊಳ್ಳುವೆವು. ಈ ಹಂಚಿಕೊಳ್ಳುವುದರ ಜೊತೆಗೆ ಅರ್ಥಮಾಡಿಕೊಳ್ಳುವ ಮನಸ್ಸು ಮುಖ್ಯವಾಗುತ್ತದೆ.

ಬೇಂದ್ರೆಯವರು ಸಖಿಯನ್ನು ಲೌಕಿಕ ನೆಲೆಯಲ್ಲಿಯೇ ಅಲ್ಲದೆ ಅಲೌಕಿಕ ನೆಲೆಯಲ್ಲಿಯೂ ಕೊಂಡಯ್ದು ಅಲ್ಲಿಯೂ ಸಹ ಪ್ರೀತಿಯ ಪಯಣವನ್ನು ಬೆಳೆಸಿದ್ದಾರೆ.

ಲಘು ನಮ್ಮ ಜೀವನಾ ಗುರುಭಾರ ಹೊತ್ತಿತ್ತು
ಎತ್ತೆತ್ತೋ ಹೊರಟಿತ್ತು ಗುರಿಮುಟ್ಟಲು
ಗುರುವೆ ಭಾರವ ಹೊತ್ತ, ಲಘು ಜೀವನವನ್ನೆ
ಪಲ್ಲಟಿಸಿ ಬಿಟ್ಟನು ಓಲ ಹುಟ್ಟಲು - - - -
ಸಖಿ ನಮ್ಮ ಸಖ್ಯದ ಆಖ್ಯಾನ ಮುಗಿದಿಲ್ಲ
ಗುರುಸೇವೆ ಉಳಿದಿದೆ ಇನ್ನೂನು
ಒಂದೆ ಧಾಟೀಲೆ ಸಮರಸ ಸಾಟಿಲೆ
ಒಂದು ಭಜನೆಯ ಅನ್ನೋಣು - - - -

ಸಖಿಯನ್ನು ಕುರಿತು ತಮ್ಮಿಬ್ಬರ ಪಯಣ ಕೊನೆಯಾಗುವುದು ಗುರುಸೇವೆಯಿಂದ. ಅದನ್ನು ಸಮರಸಗೊಳಿಸೋಣವೆಂದು ಸಖಿಯನ್ನು ಕುರಿತು ಕರೆ ನೀಡಿದ್ದಾರೆ.

ಬೇಂದ್ರೆಯವರ ಸಖ-ಸಖಿ ಜೀವನವು ಸಮಾಜಕ್ಕೆ ಮಾದರಿ ಬದುಕಾಗಿದೆ. ಅವರು ದಾಂಪತ್ಯ ಜೀವನವೇ ಒಂದು ಸಾಧನೆ ಎಂದು ನಂಬಿದ್ದರು. ಶಾಶ್ವತವಾದ ಒಲವಿನ ಶೋದಕ್ಕಾಗಿ ಜೀವನ ಪರ್ಯಂತ ಹೋರಾಡುತ್ತಲೇ ಇದ್ದರು. ದೊಡ್ಡದಾದ ಗೋಡೆಯಂತೆ ಕಷ್ಟಗಳು ಅವರ ಬದುಕಿನಲ್ಲಿ ಎದುರಾಗಿ ನಿಲ್ಲುತ್ತಲೇ ಇದ್ದವು. ಆದರೆ ಎಂಥಾ ಸಂದರ್ಭದಲ್ಲೂ ಬೇಂದ್ರೆಯವರು ಧೈರ್ಯವನ್ನು ಕಳೆದುಕೊಳ್ಳಲಿಲ್ಲ ಇದಕ್ಕೆ ತನ್ನ ಬಾಳ ಸಂಗಾತಿ ಸಖಿಯ ಪಾತ್ರವು ಇದೆ. ಎನ್ನುವಂತ ಔದಾರ್ಯ ಗುಣಗಳು ಅವರಲ್ಲಿತ್ತು.

ಜೋಡಿ ಇಲ್ಲದ ಎತ್ತು ಎಳೆದಾಡುವ ಗಾಡಿ
ನಡೆದಂತೆ ತತ್ತರಿಸಿ ಒಗೆತನವು
ಹಗೆಯಾಗದಿರಲೆಂದೆ ಇಬ್ಬರೂ ಹವಣಿಸಿ
ಒಬ್ಬರನೊಬ್ಬರ ತೂಗಿದೆವು

ಸಂಸಾರ ಯಾತ್ರೆಯು ಎರಡು ಜೋಡಿ ಎತ್ತಿನ ಗಾಡಿ ಇದ್ದಂತೆ ಗಂಡು-ಹೆಣ್ಣೆಂಬ ಎತ್ತುಗಳು ಸಂಸಾರ ಎನ್ನುವ ಗಾಡಿಯನ್ನು ಎಳೆದೊಯ್ಯಬೇಕು. ಸಂಸಾರದ ಯಾತ್ರೆ ಕೇವಲ ಗಂಡಿನಿಂದಾಗಲೀ, ಅಥವಾ ಹೆಣ್ಣಿನಿಂದಾಗಲೀ ನಡೆಯುವುದಿಲ್ಲ. ಇಬ್ಬರ ಮನಸ್ಸುಗಳು ಒಂದು ಗೂಡಿದರೆ ಮಾತ್ರ ಬದುಕು ಯಾವ ಬಿರುಗಾಳಿ ಬಂದರೂ ಮುಂದೆ ಹೋಗಲು ಸಾಧ್ಯ. ಸಂಸಾರದಲ್ಲಿ ಗಂಡಿನ ಪಾತ್ರವೆಷ್ಟಿದೆಯೋ ಹೆಣ್ಣಿನ ಪಾತ್ರವೂ ಅಷ್ಟೆ ಮುಖ್ಯ. ಸದಾ ನೆರಳಂತೆ ನಿಲ್ಲುವ ಹೆಂಡತಿ ಗಂಡನಿಗಾಗಲೀ ಅಥವಾ ಮಕ್ಕಳಿಗಾಗಲೀ ಆಸರೆಯಾಗಿ ನಿಲ್ಲುವಳು ಬೇಂದ್ರೆಯವರ ಬದುಕಿನ ಯಾತ್ರೆಯಲ್ಲಿ ಹೆಂಡತಿಯ ಅಥವಾ ಸಖಿಯ ಪಾತ್ರ ಬಹಳ ಮುಖ್ಯವಾಗಿತ್ತು. ಬಡತನ, ಕಷ್ಟ, ಸಾವು ನೋವುಗಳ ಹಿಂದೆ ಬೇಂದ್ರೆಯವರು ಕುಗ್ಗದೆ ಮುಂದೆ ನಡೆದರು. ಹೆಂಡತಿ ಶಕ್ತಿಯಾಗಿ ಸ್ಫೂರ್ತಿಯಾಗಿ ಬೆನ್ನೆಲುಬಾಗಿದ್ದಳು.

ಬೇಂದ್ರೆಯವರು ಸದಾ ಶಾಶ್ವತವಾದ, ನಿಜವಾದ ಸುಖವನ್ನು ಬಯಸುತ್ತಿದ್ದರು. ಕ್ಷಣಿಕವಾದ ಸಂಪತ್ತಿಗಾಗಿ, ಲೋಕದ ಆಸೆ-ಆಕಾಂಕ್ಷೆಗಳಿಗೆ ಅವರು ಆಸೆ ಪಟ್ಟವರಲ್ಲ. ಬಾಲ್ಯದಿಂದಲೇ ಬಡತನವನ್ನು ನೋಡಿದ್ದ ಬೇಂದ್ರೆಯವರಿಗೆ ಅದು ಅಷ್ಟು ಸಮಸ್ಯೆಯಾಗಿ ಕಾಡಲಿಲ್ಲ ಮುಖ್ಯವಾಗಿ ಅವರು ಶ್ರೀಮಂತಿಕೆಯನ್ನು ನಿರೀಕ್ಷಿಸಿದವರಲ್ಲ. ಬದುಕನ್ನು ನೆಡೆಸಬಲ್ಲ ಒಲವಿಗಾಗಿ ಹಂಬಿಸಿದವರು

ಹರಿವ ನೀರಿನ ಮೇಲೆ ಹರಗೋಲ-ಮಸಿ ಕಟ್ಟಿ
ಗೊತ್ತಿಲ್ಲವೆ ನಲ್ಲೆ ಹೊರಟಿದೆವು ?
ನೆಲವೆಂದು ಸ್ಥಿರವೆಂದು ಆಸ್ತಿ ಪಾರವ ಹಾಕಿ
ನಾನಾಡಿ ಜನ, ಮನೆ ಕಟ್ಟಿಹುದು

ನಶ್ವರವಾಗುವ ಜೀವನವನ್ನು ಕುರಿತು ಮಾತನಾಡುತ್ತಾ ಹಣದ ಬಯಕೆಯ ಬೆನ್ನತ್ತಿ ನಡೆಯುತ್ತಿರುವ ಜನರನ್ನು ಕುರಿತು ಹೇಳುತ್ತಾ ಬದುಕು ನಿಂತಿರುವುದು ಪ್ರೀತಿಯ ಸೆಲೆಯ ಮೇಲೆ ಮಾಯೆಯಾಗಿರುವ ಬದುಕು ಇರುವ ತನಕ ಸಾರ್ಥಕವೆನಿಸಿಕೊಳ್ಳಲು ಪತಿ-ಪತ್ನಿಯರ ಮನಸ್ಸುಗಳು ಬೆರೆತು ಸಾಗಬೇಕು ಎನ್ನುವ ಸಂದೇಶ ನೀಡಿದ್ದಾರೆ. ಇಲ್ಲಿನ ಸಂದೇಶ ಕೇವಲ ಬೇಂದ್ರೆಯವರ ವೈಯಕ್ತಿಕ ಜೀವನದ್ದೇ ಆಗದೆ ಸಾರ್ವತ್ರಿಕ ಸಂದೇಶವೂ ಆಗಿದೆ.

ದಾಂಪತ್ಯ ಜೀವನದಲ್ಲಿ ಸಮರಸವಿರಬೇಕು, ಮಾತಿರಬೇಕು, ಮೌನವಿರಬಾರದು ಎಂದು ಬೇಂದ್ರೆಯವರು ಎರಡು ಜೀವಗಳ ಸಂಪರ್ಕ ಮತ್ತು ಒಳದೃಷ್ಟಿಗಳನ್ನು ಹೇಳಿದ್ದಾರೆ. ಸಖ-ಸಖಿಯರ ಮಧ್ಯೆ ವಿರಸ ಮೂಡಿ ಮೌನವಾದ ಅವರ ಬದುಕು ಹಿಂಸಾಪೂರ್ವಕವಾದ ಜೀವನವಾಗುವುದು ಎಂಬ ಮೌನದ ವ್ಯಾಖ್ಯಾನ ಹೇಳುತ್ತಾ

ಮುಖದ ಮುದ್ದಿನಷ್ಟು ಮಂದಸ್ಮಿತ ಸಾಕು
ಸಾಕು ಗಾಳಿಯ ಸುಳಿಯು ಬೆಂದವಗೆ
ಇಲ್ಲದಿರೀ ಬಾಳು ಸಾಕು ಸಾಕೆನಿಸೀತು
ಸಾಕು ಈ ಹಕ್ಕಿ, ಬಿಡು ಬೇಕಾದರೆ

ಸಾಕು ಎನ್ನುವ ನುಡಿಯಲ್ಲಿ 'ಬೇಡ' ಎನ್ನುವ ಅರ್ಥ ಸೂಚಿಸುತ್ತಿದೆ. ಸಖಿಯ ಮುಗುಳ್ನಗೆ ಬಾಳಿನ ಎಂತಹ ಸಂಕಷ್ಟ-ಸಂಕೋಲೆಗಳನ್ನು ಮುರಿದು ಬೀಳಿಸುವುದು.

ಆಕೆಯು ಜೊತೆಯಲ್ಲಿದ್ದರೆ ನೊಂದ ಮನವು ಸಂತಸಗೊಳ್ಳುವುದು. ಸಖಿಯೊಬ್ಬಳಿದ್ದರೆ ತನಗೆ ಬೇರೆಲ್ಲ ಕಷ್ಟಗಳ ಕ್ಷುಲ್ಲಕವಾಗಿ ಕಾಣವುದು ಎಂದಿದ್ದಾರೆ. ಮನೆಯ ಸೊಸೆ, ಪತ್ನಿ ಚೊಚ್ಚಲ ಬಸಿರಿಯಾದಾಗ ಆ ಮನೆಯ ವಾತಾವರಣವೇ ಬದಲಾಗುವುದು. ಬೇಂದ್ರೆಯವರು ತನ್ನ ಸಖಿ ಚೊಚ್ಚಲ ಬಸಿರಿಯಾದದ್ದನ್ನು ಪ್ರಕೃತಿ ಮತ್ತು ಮನಷ್ಯ ಸಂಬಂಧದೊಂದಿಗೆ ವಿಲೀನಗೊಳಿಸಿದ್ದಾರೆ.

ನೆನೆಕೊನೆ ಕಾತಿತು ಅತ್ತೆಯ ಸೊಸೆ-ಮುದ್ದು
ಚೊಚ್ಚಿಲಬಸಿರಿ ನೀ ಎದೆ ತೆರೆದೆ

ಮೊಗ್ಗು ಕಾಯಿ ಆಯಿತು ಎನ್ನುವುದನ್ನು ಗರ್ಭಿಣಿಯಾದ ತನ್ನ ಸಖಿಯ ಬಗ್ಗೆ ಹೇಳುತ್ತಾ ಎದೆ ತೆರೆದು ಎಂದು ಮಗುವಿಗೆ ಜನ್ಮ ನೀಡಿ ಹಾಲು ಕುಡಿಸುವ ನಿರೀಕ್ಷೆಯನ್ನು ಹೇಳುತ್ತದೆ, ಹೀಗೆ ಬೇಂದ್ರೆಯವರು ತಮ್ಮ ಬದುಕಿನ ಪ್ರತಿಯೊಂದು ಸಂದರ್ಭವನ್ನು ಮನಸಾರೆ ಹಾಡಿ ಆನಂದಿಸಿದ್ದಾರೆ. ಚೊಚ್ಚಿಲ ಮಗು ಸತ್ತಾಗ ತಂದೆಗೆ ಆದ ದುಃಖವನ್ನು, ಸಂಕಟದಲಿ ನರಳಾಡುತ್ತಿದ್ದ ತಾಯಿಯ ರೋದನೆಯನ್ನು ಕಣ್ಣಿಗೆ ಕಟ್ಟುವ ಹಾಗೆ ಚಿತ್ರಿಸಿದ್ದಾರೆ.

ಮೊದಲಿನ ಫಲವೊಂದು ಮೀಸಲು ಮಣ್ಣಿಗೆ
ಎಂಜಲುಗೊಳುತಿತ್ತೊ ಮುದ್ದಿಸಿದೆ
ತುದಿಕಳಿಸಿ ಬಂದಿದ್ದ ಕಣ್ಣೀರ ತಳಿಯಿಂದ
ಕಣ್ಣಿಂಜಲು ಮಾಡಿ ಮಸಣದೊಳೆ

ಮರಳಿದೆ ಮನೆಯತ್ತ ಮರುಳಂತೆ ನೆರಳಂತೆ
ಕರುಳೆಲ್ಲ ಕಡಲೊಳು ಕುದಿಯುತಿದೆ
ಬೆರಗಾದೆ ಬೆಪ್ಪದೆ ನಮ್ಮಿಬ್ಬರ ಅಳಲು
ಮೌನ ಮೀಟಿದ ಹಾಗೆ ನರಳುತಿರೆ

ಒಂದು ಸಾರಿಯೂ ಮುದ್ದಾಡದ ಮಗುವನ್ನು ಮಣ್ಣಿಗೆ ಇಟ್ಟು ದಂಪತಿಗಳ ಹೃದಯ ಬಿರಿವ ಆ ಸಂದರ್ಭ ಕರುಣಾಜನಕವಾದುದು. ಸತಿಯ ಅಳಲು – ಇನ್ನೊಂದು ಕಡೆ ತಾಯಿಯ ದುಃಖ, ಕವಿಯ ಮನಸ್ಸು ಮೌನದಲ್ಲೇ ನರಳುತ್ತಾ ಇಬ್ಬರನ್ನೂ ಸಂತೈಸಲಾಗದ ತನ್ನ ಮನಸ್ಸು ಮೂಕ ಪ್ರೇಕ್ಷಕನಂತೆ ದೂರದಿಂದಲೇ ಕಣ್ಣೀರೊರೆಸುವ ಪ್ರಯತ್ನವನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ. ಒಂದರ ಹಿಂದೆ ಒಂದು ಎಂಬಂತೆ ಹುಟ್ಟಿದ ಸಂತಾನವೆಲ್ಲವನ್ನು ಕಳೆದುಕೊಳ್ಳುತ್ತಾ ಕರುಳಿನ ಬಳ್ಳಿಗಳು ಮರೆಯಾದಾಗ ಬದುಕು ನೀರಸವಾಗಿ ತೋರುವುದು. ಬದುಕಿನ ಬೆಂಕಿಗೆ ನೊಂದು ಬೆಂದ ಜೀವಗಳನ್ನು ಕುರಿತು –

'ಬಾಳಿನ ಬೆಂಕಿಗೆ ಮೈ ಬೆಂದು ಮನನೊಂದು
ಒಲುಮೆಯ ಒಲುಮೆಯ ಕುಲುಮೆಯಲೇ
ತಾಳಿಕೆ ಬರುವಂಥಹ ಉಕ್ಕಾಗಿ ಬರುತಿದೆ
ಮುಕ್ಕಾದ ಮೊನೆಯೀಗ ಮಸೆಯುತಿದೆ.

ಬೆಂಕಿಯೇ ಜೀವನವಾದಾಗ ಒಲುಮೆಯೆಂಬ ಚಿಲುಮೆ ಅದನ್ನು ಆರಿಸಿ, ಅವರ ಬಾಳಿಗೆ ಆಸರೆಯಾಗಿ ಬಂದು ತಾಳ್ಮೆಯ ಬಾಳಾಗಿ ನಡೆಸಿತು. ಆಗಾಗ ಅವರ ದಾಂಪತ್ಯ

ಜೀವನದಲ್ಲಿ ಅಗಲಿರಬೇಕಾದ ಸನ್ನಿವೇಶಗಳು ಸೃಷ್ಟಿಯಾದರೂ ಅದನ್ನು ಅರಿತು ಕೂಡಲೇ ಸರಿಪಡಿಸಿಕೊಳ್ಳುವ ಸ್ವಭಾವ ಬೇಂದ್ರೆಯವರಿಗಿತ್ತು. ಮರಾಠಿ ಮಾತೃ ಭಾಷೆಯಾದರೂ ಬೇಂದ್ರೆ ಬರೆದದ್ದು, ಪ್ರೀತಿಸಿದ್ದು ಕನ್ನಡ ಭಾಷೆಯನ್ನು. ಕನ್ನಡದ ಹುಚ್ಚು ಅವರನ್ನು ತೀವ್ರವಾಗಿ ಅದರಲ್ಲಿ ಮಿಂದು ಈಜಾಡುವಂತೆ ಮಾಡಿತು.

'ನಿನ್ನೆಡೆ ಕರೆಯುವಿ ನೀ ನನ್ನ
ಮತ್ತೆನ್ನ ಕನ್ನಡ್ಡ ಕರೆವುದು ತನ್ನೆಡೆಗೆ
ಚಿನ್ನಾಟ ನನಗಿದು ನಿನಗದು ಅಗಲಿಕೆ
ಮೌನದರಣ್ಯಕೆ ನೀ ಬೆದರಿದೇ

ಕನ್ನಡದ ಬಗ್ಗೆ ಪ್ರೀತಿ ಒಮ್ಮೊಮ್ಮೆ ಸಂಸಾರದಿಂದ ದೂರವಿರಬೇಕಾದ ಸಂದರ್ಭಗಳು ಒದಗಿದವು. ಇದರಿಂದ ದಾಂಪತ್ಯ ಜೀವನದಲ್ಲಿ ಕೋಪ-ತಾಪಗಳು ಉಂಟಾದರೂ ಅವರಲ್ಲಿನ ಪ್ರೀತಿಯ ಸೆಳೆತ ಮತ್ತೆ ಇಬ್ಬರನ್ನು ಒಂದುಗೂಡಿಸಿತ್ತು.

ಅಲ್ಲಿರುತಿರಲಾಗಿ ಸಹಜವಾಗಿಯೇ ನನ್ನ
ದೃಷ್ಟಿಯ ನೆಟ್ಟಿತು ಸೃಷ್ಟಿಯೊಳು
ಮಳೆಯಾಕೆ ಚಳಿಯಾಕೆ ಭೂಮಿಯ ಬೆಳೆಯಾಕೆ
ಬಿಸಿಲಾಕೆ ನನ್ನಾಕೆ ನೆರೆಯಾದರು.
ಇರುಳವಳು, ಹಗಲವಳು, ಬೆಳಕು-ನೆಳಲಿನವಳು
ಬೆಳದಿಂಗಳವಳು, ನಮ್ಮವಳಾದಳು

ಪ್ರಕೃತಿ ಸೌಂದರ್ಯದಲ್ಲಿ ತನ್ನಾಕೆಯನ್ನು ಲೀನಗೊಳಿಸಿ ತನ್ನ ಬದುಕಿನ ಹಿಡೀ ಸರ್ವಸ್ವ ಅವಳೇ ಆಗಿದ್ದ ರೀತಿಯನ್ನು ಕವಿ ಬಣ್ಣಿಸಿದ್ದಾರೆ. ಅವರ ಸಂತಸ ದಿನಗಳೆಲ್ಲವನ್ನೂ ಋತುಗಳ ವೈವಿದ್ಯದಲ್ಲಿ ಬಣ್ಣಿಸಿ ಹೇಳಿದ್ದಾರೆ. ಬೇಸಿಗೆಯನ್ನು ಕುರಿತು 'ಬೇಸಿಗೆಯಟ್ಟಲು ಬೀಸಣಿಗೆ ಬೀಸಾಡಿ । ಮರುಳಾಟದಲಿ ಜನ ತೊಳಲುತಿರೆ' ಎಂದು ಆಷಾಡವನ್ನು 'ಆಷಾಡದ ಮುಗಿಲು ಬೀಸಾಡಿ ಬಂದವು! ಈಸಾಡಿ ಬಂದಂತಹ ಆನೆಗಳೇ' ಎಂದು ಶ್ರಾವಣವನ್ನು ಕುರಿತು। ತಿರುಳೆತ್ತಿ ಹುರುಳೆತ್ತಿ ತೆನೆತೆನೆ ತೋರುವುದು । ಎಂದಿಗು ಸವಿಯಿತ್ತು ನೆಲ ಹೊಲವು' ಎಂದು ; ಚಳಿಗಾಲವನ್ನು । ಕಾಲ್ಬಿದ್ದು, ಕೈಹಿಡಿದು ಮುತ್ತಿಟ್ಟು ಮುಗಿಬಿದ್ದು। ಮೈ ಏರಿ ಮೈ ಹೊಕ್ಕು ಮಾಗಿ ಬರೆ' ಎಂದು ಮನಸಾರೆ ಹಾಡಿದ್ದಾರೆ. ಈ ಎಲ್ಲಾ ಋತುಗಳಲಿ ಸಖ-ಸಖಿಯರು ರಸದಾನಂದದಲಿ ಸಂತಸಿದ ಅನುಭವವನ್ನು ಕವಿ ಹೇಳಿಕೊಂಡಿದ್ದಾರೆ.

ಹೆಣ್ಣಿನ ಸೌಂದರ್ಯ ಮನಸ್ಸಿಗೆ ಸಂಬಂಧಪಟ್ಟಿರುವುದು ಅದು ಹೊರಗಿನ ಆಡಂಬರಕ್ಕೆ ಸಂಬಂಧಪಟ್ಟಿದ್ದಲ್ಲ ಎನ್ನುತ್ತಾ –

'ಸೌಂದರ್ಯವೆಂಬುದು, ಕಣ್ಣಿನ ತುತ್ತಲ್ಲ
ಕಣ್ಣಿಗೂ ಕಣ್ಣಾಗಿ ಒಳಗಿಹುದು
ರೂಪ–ಲಾವಣ್ಯಕೆ ಅಳೆಯಲು ಬಾರದು
ಅವುಗಳೆ ಇದರೊಂದು ಕಣವಿಹವು

ನಿಜವಾದ ಸೌಂದರ್ಯ ಅಂತಃಕರಣಕ್ಕೆ ಸಂಬಂಧಿಸಿರುವುದು, ಅದು ಬಾಹ್ಯ ರೂಪವಲ್ಲ ಎನ್ನುವುದರಲ್ಲಿ ಸಖ ತನ್ನ ಸಖಿಯ ಮನಸ್ಸನ್ನು ಅರ್ಥಮಾಡಿಕೊಂಡು ಆಕೆಯಲ್ಲಿ ಸುಪ್ತವಾಗಿ ಅಡಗಿರುವ ಮಾನವೀಯ ಮೌಲ್ಯಗಳನ್ನು ಆಕೆಯ ಗುಣಗಳನ್ನು ಹಾಡಿ ಹೊಗಳಿದ್ದಾರೆ. ಸಖೀಗೀತದಲ್ಲಿ ಕವಿಯ ಅನುಭವಗಳು ಕೇವಲ ಅವರ ಮಾತಿನಲ್ಲೇ ಮೂಡದೇ ಸಖಿಯು ತನ್ನ ಮನದಾಳದ ಮಾತುಗಳನ್ನು ಮನ ಬಿಚ್ಚಿ ಅವರೊಂದಿಗೆ ಹೇಳಿಕೊಂಡಿರುವುದನ್ನು ಕಾಣುತ್ತೇವೆ.

ಬೇಂದ್ರೆಯವರ ಸಾಧನೆಯ ಬದುಕನ್ನು ಹೊಗಳಿ ಕೊಂಡಾಡಿ ತನ್ನ ಸ್ವಭಾವವನ್ನು ಸಾಮಾನ್ಯ ಜನರೊಂದಿಗೆ ಹೋಲಿಸಿಕೊಂಡಿದ್ದಾಳೆ.

'ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ,
ಶಿಖರವನೆತ್ತಿದೆ ಮುಗಿಲಿನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಜನರೀಯಂತೆಯೇ ನೆಲದಕಡೆ ;

ಎಂದು ಕವಿ ಪತ್ನಿಯ ಮಾತಿನಲ್ಲಿ ವೈಚಾರಿಕ ಭಿನ್ನತೆ ಇರುವುದನ್ನು ಕಾಣುತ್ತೇವೆ. ಕವಿಯ ಆದರ್ಶ ಬದುಕನ್ನು ಎತ್ತರಕ್ಕೇರಿಸುತ್ತಲೇ ತನ್ನ ಸ್ವಭಾವವನ್ನು ಜನರೊಂದಿಗೆ ಲೀನಗೊಳಿಸಿ ಪತಿಯ ಸಾಧನೆಯನ್ನು ಕಂಡು ತಾನು ಆನಂದಪಟ್ಟಿರುವುದಾಗಿ ತಿಳಿಸಿದ್ದಾಳೆ.

'ಗೆಳೆಯರ ಕೂಡಾಡಿ ಬಂದಾಗ, ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೇ !
ಮನೆ ಬೆಳಕು ಮುಂದಿರೆ ಆ ಕಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀವರಿಯಿರೇ ?!

ಬದುಕು ಶುರುವಾದ ದಿನಗಳಿಂದಲೂ ಗೆಳೆಯರ ಬಳಗದಲ್ಲಿ ಬೇಂದ್ರೆಯವರ ಒಡನಾಟ ಹೆಚ್ಚಾಗಿದ್ದು, ಅದು ಕೊನೆಯವರೆಗೂ ಹಾಗೆಯೇ ಸಾಗಿ ಬಂತು. ಕವಿಯು ದಿನದ ಹೆಚ್ಚು ಸಮಯವನ್ನು ಗೆಳೆಯರೊಂದಿಗೆ ಕಳೆಯುತ್ತಿದ್ದರು. ಕನ್ನಡ ಪರ ಹೋರಾಟಗಳು, ಗೆಳೆಯರೊಡಗೂಡಿ ಬೇಂದ್ರೆಯವರ ನಾಯಕತ್ವದಲ್ಲಿ ನಡೆಯುತ್ತಿದ್ದವು. ಇಂತಹ ಅನೇಕ ಸಂದರ್ಭಗಳಲ್ಲಿ ಅವರ ಪತ್ನಿ ಏಕಾಂಗಿಯಾಗಿ ಸಮಯವನ್ನು ಕಳೆಯಬೇಕಾದ ಸನ್ನಿವೇಶಗಳು ಇವೆ. ಕವಿಯ ಈ ಚಟುವಟಿಕೆಗಳಿಂದ ಅವರ ಸಾನಿಧ್ಯ ದೂರವಾಗಿ ಪ್ರೀತಿಯ ಕೊರತೆ ಉಂಟಾದಾಗ ಪತಿಗೆ ಹೇಳಲಾಗದೆ ಮನಸ್ಸಿನಲ್ಲೇ ನೊಂದದ್ದನ್ನು ಕವಿಯ ಪತ್ನಿ ಹೇಳಿಕೊಂಡಿದ್ದಾಳೆ.

'ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸಿರೆಳೆದುದು
ಬಾಳಲ್ಲ ಬದುಕಲ್ಲ ; ಜೀವ ಜೀವಕೆ
ಉದ್ದೀಪನವಾದುದೆ ಜೀವನವು ;

ಸಖ-ಸಖಿಯರ ಜೀವನ ಸಮರಸ ತತ್ವದಿಂದ ಸಾಗಬೇಕು ಎಂಬ ಸಾರ್ವಕಾಲಿಕ ಸತ್ಯವನ್ನು ಹೇಳುತ್ತಾ ಬದುಕಿನಲ್ಲಿ ಎಲ್ಲವೂ ಸಮಾನವಾಗಿದ್ದು, ಜೀವ-ಜೀವಗಳು ಎಲ್ಲಾ ರೀತಿಯಲ್ಲೂ ಬೆರೆತು ಬಾಳಬೇಕು ಎಂಬುದನ್ನು ಕವಿಯ ಮನಸ್ಸು ಹೇಳುತ್ತಿದೆ.

ನಿಜವಾದ ಪ್ರೀತಿ ಇರುವಲ್ಲಿ ಭಯವಿರುವುದಿಲ್ಲ. ಸ್ವಾರ್ಥವಿಲ್ಲದ ಪ್ರೀತಿ ಧೀರ್ಘ ಬದುಕಿಗೆ ಅಮೃತಧಾರೆಯಾಗುವುದು ಎಂಬುದನ್ನು –

'ಭೀತಿಯ ಹುಟ್ಟಿಸುವ ಪ್ರೀತಿಯು ಪ್ರೀತಿಯೇ ?
ಪ್ರೀತಿ ಭಕ್ಷಕನಲ್ಲ ಅನ್ನವದು
ರಕ್ಷಕ ಪ್ರೀತಿಯ ರಾಕ್ಷಸನೆಂಬರೆ ?
ನಂಬದೆ ಪ್ರೀತಿಯ ಬಿಂಬವನು

ಹಸಿವಿನಿಂದ ಕಂಗೊಳಿಸುವ ಜೀವಕ್ಕೆ ಅನ್ನ, ಅನ್ನದಂತೆಯೇ ತಿನ್ನಬೇಕು. ಅದನ್ನು ರಾಕ್ಷಸರ ಭೋಜನವಾಗಿ ಮಾಡಬಾರದೆನ್ನುವಲ್ಲಿ ದಾಂಪತ್ಯದ ಬದುಕಿನಲ್ಲಿ ಪ್ರೀತಿ ಮಾತ್ರ ಇರಬೇಕು. ಭಯವಿರಬಾರದು. ಕಲಿತು-ಬೆರೆತು ಬಾಳುವ ಸಖ-ಸಖಿಯರ ಬದುಕಿನಲ್ಲಿ ರಾಕ್ಷಸತ್ವಕ್ಕೆ ಎಂದಿಗೂ ಅವಕಾಶವಿಲ್ಲ ಎಂದು ಹೇಳುತ್ತಲೇ ಬೇಂದ್ರೆಯವರ ದಾಂಪತ್ಯ ಜೀವನದಲ್ಲಿ ಪ್ರೀತಿಗೆ ಯಾವ ಕುಂದು ಕೊರತೆಯೂ ಇರಲಿಲ್ಲ. ಕವಿ ತನ್ನ ಸತಿಯನ್ನು

ಸಖಿಯಾಗಿ ಕಂಡರೆ ಹೊರತು, ದಾಸಿಯಾಗಿ ಅಲ್ಲ ಎಂಬುದನ್ನು ಸಾರಿ ಹೇಳುತ್ತದೆ. ಪ್ರತಿಯೊಬ್ಬ ವ್ಯಕ್ತಿಯು ಪತ್ನಿಯನ್ನು ಸಖಿಯಾಗಿ ಕಂಡಾಗ ಅಲ್ಲಿ ಸ್ನೇಹ, ಅನುರಾಗ, ಪ್ರೀತಿ ತಾನಾಗಿಯೇ ಅರಳುವುದು. ಸಖ-ಸಖಿಯರಲ್ಲಿ ನಿಸ್ವಾರ್ಥ ಪ್ರೀತಿ ಇರುತ್ತದೆ ಎಂಬುದಕ್ಕೆ ಬೇಂದ್ರೆಯವರ ಬದುಕು ಸಾಕ್ಷಿಯಾಗಿ ನಿಲ್ಲುತ್ತದೆ.

ತಂಪು ತಗ್ಗಿಸುತಿರಲಿ ಕಂಪು ಕಮ್ಮಯಿಸಲಿ
ಬಾಳದ ಬೇರಂತೆ ಬೇಸಿಗೆಗು
ನಿಮ್ಮ ಜೀವನದಲ್ಲಿ ಮಂಗಲವಾಗಲಿ
ಎಂದೆಂದು, ಕೊನೆಗೊಮ್ಮೆ ನೀನೆನ್ನಲು

ಪತಿಯ ಸಾಧನೆಯ ಬದುಕು ಎಲ್ಲಾ ಸಂದರ್ಭದಲ್ಲಿಯೂ ಸಮನಾಗಿ ಸಾಗಲಿ ಎನ್ನುವ ಅಭಿಲಾಷೆ ಸಖಿಯಲ್ಲಿದೆ. ಮಾಯಕಿನ್ನರಿ ಕವಿತೆಯಲ್ಲಿ ಕಾಡು ಸಿದ್ಧ ಮತ್ತು ಮರಳು ಸಿದ್ಧ ಎಂಬ ಯೋಗಿಗಳನ್ನು ವಾದದಲ್ಲಿ ಗೆಲ್ಲಲು ಹವಳಿಸಿದ್ದಳು. ಹಿಂದೆ ಅನೇಕ ಯೋಗಿಗಳನ್ನು ಮನೆಯಲ್ಲಿ ಊಳಿಗದವರನ್ನಾಗಿ ಮಾಡಿಕೊಂಡಿರುತ್ತಾಳೆ. ಆದರೆ, ಆ ಯೋಗಿಗಳು ಮಂತ್ರ ಯುದ್ಧದಲ್ಲಿ ಆಕೆಯನ್ನು ಮಂತ್ರದಿಂದ ಕಿನ್ನರಿಯನ್ನಾಗಿ ಮಾಡಿಕೊಂಡು ಹೊತ್ತು ಹೊರಟರು. ನಂತರ ಸಿದ್ಧರು ಪ್ರೀತಿಯಿಂದ ಮಾಯೆಯನ್ನು ಒಲಿಸಿಕೊಂಡರು. ಮಾಯ ಪ್ರೀತಿಯಿಂದ ಉನ್ಮತ್ತಳಾಗಿ ಸಿದ್ಧರ ಜೊತೆ ಸರಸವಾಡುವ ಸಂಭ್ರಮದಿಂದ ಚಿತ್ರಣ ಈ ಕವನದಲ್ಲಿದೆ.

ಮರುಳು ಮಾಡಾಕ ಹೋಗಿ ಮರುಳಸಿದ್ಧನ ನಾರಿ
ಮರುಳಾಗ್ಯಾಳ ಜಂಗಮಯ್ಯಾಗ
ಕಿನ್ನರಿ ಆಗ್ಯಾಳ ಕೈಯಾಗ
ನುಡಿದಾಳ ಬಂದಾಂಗ ಮೈಯಾಗ ॥ಪಲ್ಲವಿ॥
- - - - - - - - - - - - - - -
- - - - - - - - - - - - - - -
ಜುಮ್‌ಜುಮು ರುಮುಜುಮು ಗುಂಗುಣು ದುಮುದುಮು
ನಾದದ ನದಿಯೊಂದು ನಡೆದಾಂಗ
ಗಲ್ಲಗಲ್ಲಕೆ ಹಚ್ಚಿ ನಲ್ಲನಲ್ಲೆಯರಿರುಳು
ಗುಜುಗುಜು ಗುಲುಗುಲು ನುಡಿದಾಂಗ

– ಸಖೀಗೀತ (ಮಾಯ ಕಿನ್ನರಿ)

ಈ ಕವನದ ಮುಖ್ಯ ಲಕ್ಷಣವೆಂದರೆ ಅಭಿವ್ಯಕ್ತಿ ಸಾಮಗ್ರಿ, 'ಬಸಿರ ಹೂ' ಹಿಗ್ಗಿನ ಮುಳ್ಳು, ಮತ್ತು ಅನುಕರಣ ಶಬ್ದಗಳು ಅಭಿವ್ಯಕ್ತವನ್ನು ತಮಗೆ ಬೇಕಾದ ದಿಕ್ಕಿಗೆ

ತಿರುಗಿಸುತ್ತವೆ. ಮುಖ್ಯವಾಗಿ ಗಮನಿಸಬೇಕಾದ ಅಂಶ ಪ್ರೀತಿಯಿಂದ ಸಿದ್ಧರು ಮಾಯಾ ಕಿನ್ನರಿಯನ್ನ ಒಲಿಸಿಕೊಳ್ಳುವುದು. ಪ್ರೀತಿಯ ಶಕ್ತಿ, ಅದರ ಆಳವನ್ನು ಈ ಕವಿತೆ ವ್ಯಕ್ತಪಡಿಸುತ್ತದೆ. ಪ್ರೀತಿಯ ಮಾತುಗಳಿಗೆ ಹೆಣ್ಣು ಸದಾ ಶರಣಾಗುವಳೆಂದು ತಿಳಿಯುತ್ತದೆ.

'ಹುಬ್ಬಳ್ಳಿಯಾಂವಾ' ಕವನವು ಒಬ್ಬ ವೇಶ್ಯೆಯನ್ನು ಕುರಿತು ಹೇಳುವಂತದ್ದು. ಬೇಂದ್ರೆಯವರು ವೇಶ್ಯೆಯರನ್ನು ಸಮಾಜದಿಂದ ಶೋಷಣೆಗೊಂಡ ಪತಿತೆಯರು ಎಂದು ಚಿತ್ರಿಸಿಲ್ಲ. ಇಲ್ಲಿನ ವೇಶ್ಯೆಯಲ್ಲಿ ಮೂಡುವಂತಹ ಭಾವನೆಗಳು ಸಮಾಜದ ಚೌಕಟ್ಟಿನೊಳಗೆ ಅರಳುವಂತದ್ದು. ಹುಬ್ಬಳ್ಳಿಯ ವ್ಯಾಪಾರಿ ಶೆಟ್ಟರ ಹುಡುಗ ವಾರಕ್ಕೆ ಮೂರು ಸಲ ಬಂದು ಹೋಗುತ್ತಿದ್ದ, ಎಷ್ಟು ದಿನವಾದರೂ ಬಾರದೇ ಇರುವುದನ್ನು ನೋಡಿ ಆತನೊಂದಿಗೆ ಕಳೆದ ದಿನಗಳನ್ನು ನೆನೆಸಿಕೊಳ್ಳುತ್ತಾ ತನ್ನ ಗೆಳತಿಯರೊಂದಿಗೆ ರೋಧಿಸುತ್ತಿದ್ದಾಳೆ. ಜನ್ಮ ಜನ್ಮಕ್ಕೂ ತಾನೇ ಸಖನಾಗಿ ಬರಬೇಕೆಂಬ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ.

ಹುಟ್ಟಾ ಯಾಂವಾ। ನಗೀಕ್ಯಾದಿಗಿ । ಮುಡಿಸಿಕೊಂಡಾಂವ
ಕಂಡ ಹೆಣ್ಣಲೆ। ಪ್ರೀತಿ ವೀಳ್ಯೆ। ಮಡಿಚಿಕೊಂಡಾಂವ
ಜಲ್ಮ ಜಲ್ಮಕ। ಗಣ್ಯಾ ಆಗಿ। ಬರತೇನೆಂದಾಂವಾ
ಎದಿ ಮ್ಯಾಗಿನ । ಗೆಣತಿ ಮಾಡಿ । ಇಟ್ಟುಕೊಂಡಾಂವಾ

'ಪ್ರಣಯ-ಪ್ರಕೋಪ' ಸಮಯದಲ್ಲಿ 'ಸೆಟ್ಟರ ಹುಡುಗ ಸೆಟಗೊಂಡೋದಾ' ಎಂಬುದು ಮನಸ್ತಾಪಗೊಂಡು ಹೋದವನು ಇನ್ನೂ ಬರಲಿಲ್ಲವೇಕೆ ಎಂಬ ಚಿಂತೆ ಆಕೆಯಲ್ಲಿ ಅಗಾಧವಾಗಿ ಕಾಡುತ್ತಿದೆ.

'ಕನ್ನಡ ಮೇಘದೂತ' ಕಾವ್ಯದಲ್ಲಿ ಬೇಂದ್ರೆಯವರು ಸತಿಯನ್ನು 'ಸಖಿ'ಯ ಮನೋಭಾವದಿಂದಲೇ ಚಿತ್ರಿಸಿದ್ದಾರೆ. ಹೆಣ್ಣನ್ನು ಹಿಂದಿನಿಂದ ಬಂದ ಸಾಮಾನ್ಯ ಮನೋಭಾವನೆಯಿಂದ ಕಾಣದೆ ಹೊಸ ದೃಷ್ಟಿಕೋನದಿಂದ ನೋಡಿದ್ದಾರೆ. ಕಾಳಿದಾಸನ ಕಾವ್ಯಗಳಲ್ಲಿ ಸ್ತ್ರೀಯನ್ನು ಚಿತ್ರಿಸಿರುವ ರೀತಿಗಿಂತ ಬೇಂದ್ರೆಯವರು ಭಿನ್ನವಾಗಿ ಕಂಡಿದ್ದಾರೆ. ಬದುಕಿನ ಪಯಣ ಸಾಗಲು ಸಖಿಯ ಅವಶ್ಯಕತೆ ಇರಲೇಬೇಕು ಎಂಬುದನ್ನು ಸಾಕಷ್ಟು ಮನದಟ್ಟು ಮಾಡಿಸಿದ್ದಾರೆ. 'ಮೇಘದೂತ' ಕಥಾ ವಸ್ತುವು ಪ್ರೀತಿ, ಒಲವು, ಪ್ರಣಯ ಅಥವಾ ವಿರಹವೇ ಆಗಿದ್ದು, ಇಲ್ಲಿನ ಪ್ರೀತಿ ವಿಕೃತ ಕಾಮವಾಗದೇ ಸುಪ್ರೇಮವಾಗುವ ಬಗೆಯನ್ನೇ ಇಲ್ಲಿಯೂ ಕಾಣುತ್ತೇವೆ. ಹೆಣ್ಣಿಗೆ ಸಿಗಬೇಕಾದ ಸ್ಥಾನ, ಮಾನಕ್ಕೆ ಧಕ್ಕೆ ಬಾರದಂತೆ ಆದರ್ಶ ಹೆಣ್ಣಾಗಿ ಚಿತ್ರಿಸಿದ್ದಾರೆ.

ಕನ್ನಡ ಮೇಘದೂತದ ಪೀಠಿಕಾ ಭಾಗದಲ್ಲಿ ಭೂಮಿಯ ಕಾಮವನ್ನು ಕುರಿತು ಬೇಂದ್ರೆಯವರು ಈ ರೀತಿಯಾಗಿ ಚಿತ್ರಿಸಿದ್ದಾರೆ.

ಮಣ್ಣು – ಹೆಣ್ಣು ಬಾನೊಡೆಯನಿಂದ ಅಗಲಿಹಳನಾದಿಯಿಂದ
ವಿರಹಬವಣೆಯಲಿ ತಿರುಗೆ ತಿರುಗುವಳು ಹೊತ್ತು ಸುತ್ತಿನಿಂದ
ಕಣ್ಣನೀರು ಕಡಲಾಗಿ ಕಾದು ಉಗಿಯಾಗಿ ಮೋಡವಾಗಿ
ಎದೆಗೆ ಉದುರೆ ಬಾನಿಂದ, ನವಿರುವಳು ಹೃದಯ ಹಚ್ಚನಾಗಿ॥

ಮಣ್ಣು–ಹೆಣ್ಣು–ಪೃಥ್ವಿ. ಇವಳು ತಿರುಗುವುದು ಬಾನೊಡೆಯನಿಂದ ಅಗಲಿ, ವಿರಹವೇದನೆಯಿಂದ ತಿರುಗುತ್ತಿದ್ದಾಳೆ. ಅವಳು ಬಳಲಿ, ದುಃಖಪಟ್ಟು, ಸುರಿಸಿದ ಕಣ್ಣೀರೆ, ಉಗಿಯಾಗಿ, ಮೋಡವಾಗಿ ಬಾನೊಡೆಯನನ್ನು ಸೇರುತ್ತಾಳೆ. ಆ ಕೂಡುವಿಕೆಯ ಸಂತೃಪ್ತಿಯ ಪರಿಣಾಮವಾಗಿ ಸುರಿಸಿದ ಆನಂದಬಾಷ್ಪವೇ ಮಳೆಯಾಗಿದೆ. ಈ ಮಳೆಯಿಂದ ಹಚ್ಚ ಹಸುರಾದ ಬೆಳೆಯನ್ನು ಕೊಡುವುದು ಭೂಮಿತಾಯಿಯ ಇನ್ನೊಂದು ಸಂತೃಪ್ತಿಯ ಸಂಕೇತವಾಗಿದೆ. ಹೆಣ್ಣನ್ನು ಸಮೃದ್ಧಿಯ ಸಂಕೇತವಾಗಿ ಕವಿ ಹೋಲಿಸಿದ್ದಾರೆ.

ಗಂಡ–ಹೆಂಡಿರ ಮಧ್ಯೆ ಮೇಲು–ಕೀಳೆಂಬ ಭೇದ–ಭಾವ ದೂರ ಸರಿದು ಶುದ್ಧ ಮನಸ್ಸಿನಿಂದ ಹೆಣ್ಣನ್ನು ಕಾಣುವುದರಿಂದ ದಾಂಪತ್ಯದ ಜೀವನದಲ್ಲಿ ಲೋಕದ ಸಖಗಳು ಕಾಣುವುದು. ‘ಚಿಗುರಿಂಗಳ ಚೆಲುವಿ’ ಎಂದು ಭೂಮಿ ತಾಯಿಯನ್ನು ಕರೆದಿರುವ ಬೇಂದ್ರೆಯವರ ಪ್ರತಿಮಾದೃಷ್ಟಿ ಅಸಾಧಾರಣವಾದದ್ದು. ಈ ಕವನದಲ್ಲಿ ಮಾನವನ ಜೀವ ವಿರೋಧಿ ಕೃತ್ಯಗಳನ್ನು ನೆನೆಸಿಕೊಳ್ಳುತ್ತಾ ಭೂಮಿ ದುಃಖಿಸುತ್ತಿರುವುದನ್ನು ಹೇಳುತ್ತದೆ. ಭೂಮಿಯನ್ನು ಕುರಿತು ಚೆಲುವು, ಕೋಮಲತೆ, ಸಮೃದ್ಧಿಗಳ ಪ್ರತೀಕವೆಂಬಂತೆ ಕವಿ ಚಿತ್ರಿಸಿದ್ದಾರೆ. ಭೂಮಿ ಮಾನವನ ಕೃತ್ಯಗಳಿಗೆ ಬೆದರಿ ನಿಂತಿರುವ ರೀತಿಯನ್ನು ಕವಿ ಈ ರೀತಿಯಾಗಿ ಹೇಳಿದ್ದಾರೆ.

ಚಿಗುರಿಂಗಳ ಚೆಲುವಿ ಬೆಧರಿ ನಿಂತಾಳ ನೋಡೋ ಬೆಧರಿ ನಿಂತಾಳ
ಹೊಳಿ ಹಳ್ಳ ತೊರೆದಾವೊ
ಗೆಣೆಹಕ್ಕಿ ಬೆರೆದಾವೊ
ಆಗದವರ ಹೊಟ್ಟಿ ಉರದಾವೊ ಗೆಣೆಯಾ ಉಂಢಾವ
ಅಂಥವರ ದಿಟ್ಟಿ ಮನಿ ಮುರದಾವ

ಹರಿಯುತ್ತಿರುವ ಹೊಳೆ-ಹಳ್ಳಗಳು ಜೊತೆಗೂಡಿರುವ ಗೆಣೆಹಕ್ಕಿಗಳು ಭೂಮಿಯ ಸಮೃದ್ಧಿ ಸೌಂದರ್ಯ ಮತ್ತು ಪ್ರೀತಿಗಳನ್ನು ಸಂಕೇತಿಸುತ್ತದೆ. ಬೇಂದ್ರೆಯವರ ದೃಷ್ಟಿಯಲ್ಲಿ ಭೂಮಿ ಹೆಣ್ಣು ಒಂದೇ ಎಂದು ಭಾವಿಸುತ್ತಾರೆ. ಆದ್ದರಿಂದಲೇ ಈ ಕವನದಲ್ಲಿ ಹೆಣ್ಣಿಗೆ ಇರಬೇಕಾದ ಎಲ್ಲಾ ಗುಣಗಳನ್ನು ಭೂಮಿಯಲ್ಲಿ ಕಂಡಿದ್ದಾರೆ. ಹಾಗೆಯೇ ಹೆಣ್ಣನ್ನು ಭೂಮಿಗೆ ಹೋಲಿಸುವುದು ಇದೇ ಕಾರಣಕ್ಕಾಗಿಯೇ. ಹಿಂದಿನ ಕಾಲದಿಂದಲೂ ಭೂಮಿಯ ಬಗ್ಗೆ ವಿಶೇಷವಾದ ಭಕ್ತಿ, ಕಾಳಜಿಗಳಿವೆ. ಅದೇ ರೀತಿ ಹೆಣ್ಣಿನಲ್ಲೂ ಈ ಭಾವನೆಗಳನ್ನು ಕವಿ ತೋರಿಸಿರುವುದು ಅವರ ಆದರ್ಶ ಮನೋಭಾವವನ್ನು ವ್ಯಕ್ತಪಡಿಸುತ್ತದೆ.

ಡಾ|| ಕೆ.ಎಸ್.ಶರ್ಮಾರವರು, 'ಸಖ್ಯ ಎನ್ನುವುದೊಂದು ಅಂತರಂಗದ ದರ್ಶನವಾಗಿದ್ದು, ಅದರ ಚಲನ-ವಲನಗಳ ಪ್ರತಿರೂಪವೇ ಸಖ್ಯ' ಎಂದು ಸ್ನೇಹ, ಪ್ರೀತಿಯ ಪರಿಕಲ್ಪನೆಯನ್ನು ಹೇಳಿದ್ದಾರೆ. ಅಂತರಂಗದ ಚಲನ-ವಲನಗಳ ತಾಕಲಾಟವನ್ನು 'ಮೇಘದೂತ' ಕಾವ್ಯ ಪ್ರತಿಬಿಂಬಿಸುವುದು. ಯಕ್ಷನ ಅಂತರಂಗದ ಆತ್ಮವಾಗಿ ಯಕ್ಷಿ ಶೋಭಿಸುತ್ತಾಳೆ.

'ಬಳ್ಳಿಯಲಿ ಆ ಬಳುಕು ಮೈಯ್ಯ ಹುಲ್ಲೆಯಲಿ ಬೆದರುಗಣ್ಣು
ಮುಖದ ಛಾಯೆ ಚಂದ್ರನಲ್ಲಿ ಗರಿಗಳಲಿ ಹೆಳಲ ಭಾರವನ್ನು
ನದಿಯ ಹರಿತದಲಿ ಹುಬ್ಬು, ಮುರಿತವನು ಕಾಣಬೇಕು ಎಂದೆ
ಇಷ್ಟು ಕೊಡ ಸಾದೃಶ್ಯ ಕಾಣದೆ, ಚಂಡಿ, ನೊಂದೆ, ಬೆಂದೆ||

ಯಕ್ಷಿಯ (ಸಖಿಯ) ಪ್ರತಿಯೊಂದು ಚಲನ-ವಲನಗಳು ಕವಿಯ ಮನಸ್ಸಿನಲ್ಲಿ ಚಿತ್ತಾರ ಮೂಡಿಸಿದೆ. ಪ್ರಕೃತಿಯ ಪ್ರತಿಯೊಂದು ವಸ್ತುವಿನಲ್ಲೂ ತನ್ನ ಸಖಿಯ ಸೌಂದರ್ಯವನ್ನು ವರ್ಣಿಸುತ್ತಾರೆ. ಬಳ್ಳಿಯಲ್ಲಿ ಪ್ರೇಯಸಿಯ ಬಳುಕುವ ಮೈಸಿರಿ, ಜಿಂಕೆಯ ಕಣ್ಣುಗಳಲ್ಲಿ ಅವಳ ಬೆದರುಗಣ್ಣು, ಆಕಾಶದಲ್ಲಿ ಕಾಣುವ ಚಂದ್ರನಲ್ಲಿ ಅವಳ ಮುಖದ ಪ್ರತಿಬಿಂಬ, ಗಿಡ-ಗಂಟೆಗಳಲ್ಲಿ ಅವಳ ನೀಲ ಕೂದಲಿನ ಜಡೆ, ಹರಿಯುವ ನದಿಯಲ್ಲಿ ಅವಳ ಕಣ್ಣಿನ ಹುಬ್ಬುಗಳ ಸೊಗಸನ್ನು ಕಾಣುವ ಪ್ರಿಯಕರ ಪರಿತಪಿಸುತ್ತಿರುವನು. ಅವಳ ನೆನಪಿನಲಿ ನೊಂದು-ಬೆಂದು ಅವಳ ನಿರೀಕ್ಷೆಯಲ್ಲಿ ಕಾಯುತ್ತಿರುವನು.

ನಲ್ಲೆಯಿಂದ ಅಗಲಿದ ನಲ್ಲನ ಹೃದಯ ಆಕೆಯನ್ನು ಕಾಣುವ ಹಂಬಲದಲ್ಲಿದ್ದು, ಹೇಗಾದರೂ ತನ್ನ ಮನದ ಇಂಗಿತವನ್ನು ಸಖಿಗೆ ತಿಳಿಸಲು ಮೋಡವನ್ನು ಸಂದೇಶವಾಹಕನಾಗಿ ಕಳುಹಿಸುವನು. ಮೋಡ ನೋಡಿ ಮನಸಾಗಿ ನಿಂತನೋ ಹೇಗೋ ಏನೋ ಕಂಡು ರಾಜರಾಜನನು ಚರನು ಇದ್ದ ಕಣ್ಣೀರ ನುಂಗಿಕೊಂಡು, ಮೋಡ ಕಂಡೊಡನೆ ಬೇರೆ ಬಗೆಯಹುದು ಸಖಿಗು ಎಂತೋ ಏಕೋ ಕೊರಳ ಗೆಳತಿ ದೂರುಳಿದ ಮೇಲೆ ಆ ಗತಿಯ ಹೇಳಲೇಕೋ॥ ಯಕ್ಷನ ಕಣ್ಣೀರನ್ನು ನೋಡಿ, ಮೋಡರಾಯ ಮುಂದೆ ಹೋಗಲು ಮನಸಾಗದೆ ಅಲ್ಲೇ ನಿಲ್ಲುತ್ತಾನೆ. ತನ್ನ ಪ್ರಾಣದ ಗೆಳತಿ ತನ್ನನ್ನು ಅಗಲಿ ಹೇಗಿರುತ್ತಾಳೋ, ಏನೋ ಎಂದು ಮನ ನೊಂದು ನುಡಿಯುತ್ತಾನೆ. 'ಬಂತು ಶ್ರಾವಣ ಎಂತು ಬದುಕುವಳೋ ಮಡದಿ ಜೀವ ಉಳಿಸಿ' ಎಂಬ ಗೀತೆ ಸಾಲಿನಲ್ಲಿ ಬಯಕೆಯ ಬಳ್ಳಿ ಚಿಗುರೊಡೆಸುತ್ತಿರುವುದನ್ನು ನೆನೆಯತ್ತಾ ತನ್ನಾಕೆಗೆ ತನ್ನ ಯೋಗಕ್ಷೇಮ ತಿಳಿಸಿ ಆಕೆಯ ಪ್ರಾಣವನ್ನು ಉಳಿಸಬೇಕೆಂದು ಯಕ್ಷ ಮೋಡರಾಯನಲ್ಲಿ ಬಿನ್ನೈಸಿಕೊಳ್ಳುತ್ತಿದ್ದಾನೆ. ಕನಸು-ಮನಸಿನ್ನಲ್ಲಿ ಸಖಿಯ ಮುಖದ ಛಾಯೆಯನ್ನೇ ನೆನೆಸಿಕೊಳ್ಳುತ್ತಾ ಎಚ್ಚೆತ್ತಿ ಕೂರುವನು.

'ಬಯಲಿನಲ್ಲಿ ತೋಳೆರೆದು ನಿನ್ನ ಬಿಗಿತಾಗಿ ಅಪ್ಪಿಕೊಂಡು
ಸಿಕ್ಕೆ ನೀನು ಹೇಗಾರೆ ಎಂದೆ, ನಾ ಕನಸುಗಳಲಿ ಕಂಡು॥

ಬಯಲಿನಲ್ಲಿಯೇ ಅವಳನ್ನು ಕಂಡಂತೆ, ಬಿಗಿದಪ್ಪಿದಂತೆ ಕನಸು ಕಾಣುವನು. ಒಂದು ಕ್ಷಣವೂ, ಒಂದು ದಿನದಂತೆ ಕಾಣುವ ಯಕ್ಷನಿಗೆ ಕಾಲ ಕಾಳೆಯುವುದು ಕಷ್ಟವಾಗಿ ತೋರುತ್ತದೆ.

ಎಷ್ಟು ದಿವಸ ಇನ್ನುಳಿದುವೆಂದು ದಿನದಿನವು ಲೆಕ್ಕವಾಗಿ
ಜೀವ ಹಿಡಿದುಕೊಂಡಿರುವ ನಿನ್ನ ಅತ್ತಿಗೆಯ ನೋಡು ಹೋಗಿ॥
ನಾರಿ ಹೃದಯದಲಿ ನಾರಿ ನೆಳೆಯುವೊಲು ಇಹುದು ಆಸೆಯೊಂದು
ಅಗಲಿದಾಗಲೇ ಕಳಚಿ ಬೀಳುವೆದೆ-ಹೂವ ಬಿಗಿದುಕೊಂಡು॥

ಯಕ್ಷನು ಹೇಗೆ ದಿನಗಳನ್ನು ಲೆಕ್ಕ ಹಾಕುತ ಶಾಪದ ಕಾಲ ಕಳೆಯುವುದೋ ಎಂದು ನಿರೀಕ್ಷಿಸುತ್ತಿರುವನೋ ಹಾಗೆಯೇ ಯಕ್ಷಿಯು ಯಕ್ಷನ ಕೂಡಲು ಕಾಯುತ್ತಿರುತ್ತಾಳೆ. ಜೀವ ಹಿಡಿದು ತನಗಾಗಿ ಕಾಯುತ್ತಿರುವ ಯಕ್ಷನನ್ನು ಕಂಡು ತನ್ನ ಸ್ಥಿತಿಯನ್ನು ವಿವರವಾಗಿ ಹೇಳು ಎಂದು ಮೋಡವನ್ನು ಬಿನ್ನೈಸಿಕೊಂಡಿದ್ದಾಳೆ.

ಕುಡಿದು ಬಿಡುವರೋ ಕಣ್ಣ ಕುಡಿಗಳಲಿ ಬೆಳೆಗೆ ಬಂದು ಎಂದು
ಹುಬ್ಬ ಹಾರಿಸುವ ಬಿಂಕವಿಲ್ಲದಾ ಹಳ್ಳಿ ಹೆಂಗಳಂದು ॥
ಅದೇ ಹರಗಿ ನೆಲಗಂಪ ಹರಹುವಾ ಹೊಲದ ಮಾಳವೇರಿ
ನೀರ ತಳಿಸಿ ಹಗುರಾಗಿ, ಉತ್ತರಕೆ ಮತ್ತೆ ಹೋಗು ಸಾರಿ॥

ಮೋಡರಾಯ ಸಾಗಿ ಹೋಗುವ ದಾರಿಯಲ್ಲಿ ಹಳ್ಳಿಯ ಹೆಂಗಳೆಯರು ತಡೆಯಬಹುದು. ಅಲ್ಲಿ ಹೊಲಗದ್ದೆಗಳಿಗೆ ನೀರು ಹಾಯಿಸಿ ಮುಂದೆ ಸಾಗು ಎಂದು ಹೇಳುತ್ತಿದ್ದಾನೆ. ಹಳ್ಳಿ ಹೆಂಗಸರ ಮನಸ್ಸು ಬಿಂಕ, ಬಿಗುಮಾನವಿಲ್ಲದ ಶುದ್ಧ, ನಿರ್ಮಲವಾದ ಮನಸ್ಸು ಎಂದು ಹೇಳಿರುವಲ್ಲಿ ಅವರ ಮುಗ್ಧತೆಯನ್ನು ವ್ಯಕ್ತಪಡಿಸುತ್ತದೆ.

ಒಂಟಿಯಾಗಿ ಇರುಳುದ್ದ ಕಳೆದ ಸತಿಗಾಗಿ ರವಿಯು ಬಹನು
ಸಾವಿರಾರು ಕರಚಾಚಿ ಕಮಲೆಯರ ಕಣ್ಣನೊರಿಸಲಿಹನು॥
ತನ್ನ ಹೆಂಡಿರನು ತಾನೆ ತವಿಸದಿನ್ನಾರು ಶ್ರಮಿಸುಹುದು
ಅಡ್ಡ ನೀನು ಇರಬೇಡ ರವಿಗೆ ; ಅವ ಕೆಂಡವಾಗಬಹುದು॥

ಗಂಡನನ್ನು ಅಗಲಿ ಒಂಟಿಯಾಗಿ ಕಾಲ ಕಳೆಯುತ್ತಿರುವ ತನ್ನ ಸಖಿಗಾಗಿ ರವಿಯು ಬರುವನು. ದುಃಖದಿಂದ ಬಾಡಿಹೋದ ತನ್ನ ಸಖಿಗಾಗಿ ಸಾವಿರಾರು ಕರ ಚಾಚಿ ದುಃಖವನ್ನು ದೂರಮಾಡುವನು. ಹೆಣ್ಣನ್ನು ಕಮಲೆಯರು ಎಂದು ಸಂಭೋಧಿಸುವುದು ಹೆಣ್ಣಿನ ಮನಸ್ಸು ಸೂಕ್ಷ್ಮವಾದುದು ಎಂದು ತಿಳಿಯುತ್ತದೆ. ತನ್ನ ಸಖಿಯ ಮನಸ್ಸನ್ನು ಅರ್ಥಮಾಡಿಕೊಂಡಿದ್ದ ಕವಿಯು ಆಕೆಯ ಮನಸ್ಸಿನ ಗೊಂದಲವನ್ನು ವ್ಯಕ್ತಪಡಿಸಿದ್ದಾರೆ. ಸಖಿಯನ್ನು ಸಂತೈಸಲು ಬಂದ ರವಿಗೆ ಅಡ್ಡ ನಿಲ್ಲದಿರು ಎಂದು ಮೋಡರಾಯನಿಗೆ ಎಚ್ಚರಿಕೆ ನೀಡಿದ್ದಾನೆ. ಇದರಿಂದ ರವಿರಾಯ ಕೆಂಡವಾಗಬಹುದು ಎಂಬ ಮಾತಿನಲ್ಲಿ ಸೂರ್ಯ ದೇವನಿಗೆ ಹೆಂಗಳೆಯರ ಮೇಲೆ ಇರುವ ಅನುಕಂಪ, ಮಮತೆಯನ್ನು ಪ್ರತಿಬಿಂಬಿಸುತ್ತಿದೆ. ಯಕ್ಷನ ಮನೆಯ ಪರಿಸರದ ಪ್ರತಿಯೊಂದು ವಸ್ತುವನ್ನು ಯಕ್ಷ ಮೋಡರಾಯನಿಗೆ ವಿವರವಾಗಿ ಹೇಳುತ್ತಾನೆ. ಮೋಡರಾಯ ಸುಲಭವಾಗಿ ಗೊಂದಲವಾಗದಂತೆ ಯಕ್ಷನ ಮನೆಯ ತಲುಪಲು ಅಲ್ಲಿರುವ ಪ್ರತಿಯೊಂದು ವಸ್ತುವಿನ ಗುರುತನ್ನು ಹೇಳುತ್ತಾನೆ.

ಇಂತು ನಮ್ಮ ಮನೆ ಕಂಡುಕೊಳ್ಳು ನೀ ಬೇರೆ ಗುರುತೆ ಇದಕೆ
ಶಂಕ ಪದ್ಮಗಳು ಧ್ವಾರಪಾಲರೊಲು ಎಡಕೆ ಬಲಕೆ ಇದಕೆ॥
ಅಲ್ಲಿ ಬಣ್ಣ ಗುಂದಿರುವ ಮನೆಯು ತೋರುವುದು ನನ್ನ ಒಲವಾ
ಸೂರ್ಯನಿಲ್ಲದಿರೆ ಕಮಲವೆಂತು ತೋರೀತು ತನ್ನ ಚೆಲುವಾ॥

ಹಾದಿಯಲ್ಲಿ ಸಾಗುವಾಗ ಸಿಗುವ ಪ್ರಕೃತಿಯ ಎಲ್ಲಾ ವಸ್ತುಗಳನ್ನು ವಿವರವಾಗಿ ಹೇಳಿ ಮನೆಯ ತಲುಪಿದಾಗ ಎಡ-ಬಲಗಳಲ್ಲಿ ಧ್ವಾರಪಾಲಕರಾಗಿ ಶಂಕ-ಪದ್ಮಗಳು ಇರುವುದೆಂದು ಹೇಳುತ್ತಾನೆ. ತಾನಿದ್ದಾಗ ಬಣ್ಣದಿಂದ ಕಂಗೊಳಿಸುತ್ತಿದ್ದ ಮನೆಯು ಈಗ ಬಣ್ಣ ಕಳೆದುಕೊಂಡು ಸಪ್ಪೆ ಮೋರೆ ಹಾಕಿಕೊಂಡಿದೆ. ಸೂರ್ಯನಿಲ್ಲದೆ ಕಮಲ ಹೇಗೆ ಅರಳು ಸಾಧ್ಯವಿಲ್ಲವೋ ಹಾಗೆಯೇ ನನ್ನಾಕೆ ನಾನಿಲ್ಲದೆ ತನ್ನ ಚೆಲುವನ್ನೇ ಕಳೆದುಕೊಂಡಿರುತ್ತಾಳೆ ಎಂದು ಮೋಡರಾಯನಲ್ಲಿ ಮನೆಯ ಪರಿಚಯ, ಪರಿಸ್ಥಿತಿಯನ್ನು ಹೇಳುತ್ತಾನೆ.

ಅತ್ತು ಅತ್ತು ಮತ್ತತ್ತು ಕೆದರಿಕೊಂಡಿಹುದು ಕಣ್ಣ ಪೊಗರು
ಬೆಚ್ಚನು ನೆರನುಂಡುಂಡು ಸೊಪ್ಪೆಯಾಗಿಹುದು ತುಟಿಯ ಚಿಗುರು॥
ಗಲ್ಲದಲ್ಲಿ ಕೈ, ಓರೆ, ಮೋರೆ, ನಿಡಿಗೂದಲುದ್ದ ಚಿಂತೆ
ಮೋಡ ಮುಸುಕಲಿದೆ ಮಂಕುಗವಿದ ಆ ದಿನ ಚಂದ್ರನಂತೆ॥

ಯಕ್ಷನ ನೆನಪಿನಲ್ಲಿ ಅತ್ತು ಸುಸ್ತಾದ ಯಕ್ಷಿಯ ಮನಸ್ಥಿತಿಯನ್ನು ನೆನೆದು ದುಃಖಿತನಾಗುತ್ತಾನೆ. ದುಃಖಿತಳಾಗಿ ಯಕ್ಷಿಯ ಕಣ್ಣು ಮಂಕಾಗಿರುವುದು. ಬೆಚ್ಚನೆಯ ಉಸಿರಿನಿಂದ ತುಟಿಯ ಚೆಲುವು ಬತ್ತಿ ಹೋಗಿರುವುದು. ಯಕ್ಷನ ಚಿಂತೆಯಲ್ಲಿ ಬಾಡಿ ಹೋದ ಆಕೆಯ ಕಳೆಗುಂದಿದ ಮೊಗವು ಮೋಡಗವಿದ ಆಕಾಶದಲ್ಲಿ ಮಂಕಾದ ಚಂದ್ರನಂತೆ ಅವಳ ತನು-ಮನಗಳು ಕಾಂತಿಯನ್ನು ಕಳೆದುಕೊಂಡಿರುವುದು ಎಂದು ಹೇಳಿದ್ದಾರೆ.

ಅವಳು ಬೀಳುವಳೋ ನಿನ್ನ ಕಣ್ಣೆ ಆಚಾರದಲ್ಲಿ ತೊಡಗಿ
ಸೊರಗಿ ಕಡ್ಡಿಯಾದವನ ನನ್ನ ಚಿತ್ರವನೆ ಬರೆದ ಹುಡುಗಿ॥
ಇಲ್ಲ ಕೇಳುತಿರಬಹುದು ಸಾಕು ಸಾರಿಕೆಯ ಹೇಳೆ ಜೇನೇ
ಅವನ ಮುದ್ದು ನೀ ನಿಮ್ಮ ಒಡೆರನು ಒಮ್ಮೆ ನೆನೆವೆಯೇನೆ ?!!

ಮೋಡರಾಯ ಯಕ್ಷಿಯನ್ನು ಕಂಡಾಗ ಆಕೆ ಆಚಾರದಲ್ಲಿ ತೊಡಗಿರುತ್ತಾಳೆ. ಮನದಲ್ಲಿ ಮೂಡಿದ ಯಕ್ಷನ ಚಿತ್ತಾರವನ್ನು ಬರೆಯುತ್ತಾ ಕಾಲ ಕಳೆಯುತ್ತಿರುತ್ತಾಳೆ. ಕೇಳುತಿರಬಹುದು ಸಾಕು ಸಾರಿಕೆಯ 'ಹೇಳೆ ಜೇನೇ ಅವನ ಮುದ್ದು ನೀ, ನಿಮ್ಮ ಒಡೆಯರನು ಒಮ್ಮೆ ನೆನೆವೆಯೇನೇ ? ಎನ್ನುವ ಪದಗಳು ಅಕ್ಕ ಮಹಾದೇವಿಯ ವಚನಗಳನ್ನು ನೆನೆಪಿಸುವುದು. ಚೆನ್ನ ಮಲ್ಲಿಕಾರ್ಜುನನನ್ನು ನೆನೆಯುತ್ತಾ ಕಾಡು-ಮೇಡು ಅಲೆಯುತ್ತಾ ಮಲ್ಲಿಕಾರ್ಜುನನನ್ನು ನೋಡುವ, ಮಾತಾಡುವ, ಕೂಡುವ ಆಸೆಯಿಂದ, ಪ್ರಕೃತಿಯಲ್ಲಿನ ಪ್ರತಿಯೊಂದು ಗಿಡ, ಮರ,

ಪ್ರಾಣಿ, ಪಕ್ಷಿಗಳನ್ನು ಕುರಿತು ಯಾರಾದರೂ ಚೆನ್ನ ಮಲ್ಲಿಕಾರ್ಜುನನನ್ನು ಕಂಡಿರಾ ಎಂದು ವಿಚಾರಿಸುತ್ತಾಳೆ.

ಕಳೆದವೆಷ್ಟು ಇನ್ನುಳಿದವೆಷ್ಟು ದಿನವೆಂದು ಲೆಕ್ಕವಿಟ್ಟು
ಹೊಸ್ತಿಲಕೆ ಹೂವಿಟ್ಟು ನೋಡುವಳೇ ನಾನು ಹೋದ ತೊಟ್ಟು॥
ಇಲ್ಲ ಎದೆಯ ಮುಟ್ಟಿಳಿದ ಮೊದಲ ಸಂಗಗಳ ಸವಿವಳೇನೋ
ನಲ್ಲರಗತಿ ನಲ್ಲೆಯರಿಗೆಲ್ಲ ಇವು ಆಟ ಇಷ್ಟೇ ತಾನೋ ?॥

ಯಕ್ಷನು-ಯಕ್ಷಿಯನ್ನು ಅಗಲಿ ಹೋದ ದಿನಗಳನ್ನು ಲೆಕ್ಕವಿಡುತ್ತಿದ್ದಾಳೆ. ಉಳಿದ ದಿನಗಳನ್ನು ಎಣಿಸುತ್ತಾ ಯಕ್ಷನು ಹೋದಂತ ದಾರಿಯನ್ನೇ ವೀಕ್ಷಿಸುತ್ತಾ ಮುಂದಿನ ದಿನಗಳು ಹೇಗೆ ಕಳೆಯುವುದೆಂದು ದುಃಖಿಸುತ್ತಿದ್ದಾಳೆ. ಯಕ್ಷನೊಡನೆ ಕೂಡಿ ಕಳೆದ ದಿನಗಳನ್ನು ನೆನೆಸಿಕೊಳ್ಳುತ್ತಾ ಸುಖಿಸುತ್ತಿರಬಹುದು. ಸಖನಿಂದ ದೂರವಾದ ಸಖಿಯರಿಗೆ ದಾರಿ ಎಂದರೆ ನೆನಪುಗಳಷ್ಟೇ ಎಂಬುವ ಮಾತುಗಳಲ್ಲಿ ಸತ್ಯ ಶೋಧಕವಾದ ಪ್ರೀತಿ ವ್ಯಕ್ತವಾಗಿದೆ. ಹೆಣ್ಣು ಪ್ರೀತಿಯ ಪ್ರತೀಕವಾಗಿ ನಿಲ್ಲುತ್ತಾಳೆ.

ಹಗಲು ಹೊತ್ತು ಹೋದೀತು ಕೆಲಸದಲಿ ಹೇಗೋ, ಬಲ್ಲೆ ನಾನು
ಇರುಳು ಅವಳ ಗತಿಯೇನೋ ? ಅಳುವದೋ ? ನೆನೆಯಲೊಲ್ಲೆ ನಾನು॥
ನನ್ನ ಸುದ್ದಿ ಹೇಳಿದರೆ ಸಾಕು, ನೀನಿಣಿಕಿ ನೋಡು, ಪಾಪಾ
ಸಾಧ್ವಿ ನೆಲದೊಳೆ ನಿದ್ದೆಯಿಲ್ಲದೇ ಹೊರಳುತಿರುವ ತಾಪಾ॥

ಅಗಲಿದ ಹೃದಯಗಳು ಏಕಾಂತವಾಗಿದ್ದಾಗ ಕಾಲ ಕಳೆಯುವುದು ಕಷ್ಟಕರವಾದದ್ದು ಯಕ್ಷಿಯ ಹಗಲೆಲ್ಲ ಕೆಲಸದಲ್ಲಿ ಯಕ್ಷನನ್ನು ಮರೆಯಬಹುದು. ರಾತ್ರಿಯಲ್ಲಿ ತಾನೊಬ್ಬಳೆ ಇದ್ದಾಗ ಸಖನ ನೆನಪು ಅವಳನ್ನು ಸಂಕಟಕ್ಕೆ ಹೀಡು ಮಾಡುತ್ತದೆ. ಇರುಳಲ್ಲಿ ಅವಳ ಪರಿಸ್ಥಿತಿಯನ್ನು ನೆನೆದು ಯಕ್ಷ ದುಃಖಿತನಾಗಿದ್ದಾನೆ. ರಾತ್ರಿಯೆಲ್ಲಾ ನಿದ್ದೆ ಇಲ್ಲದೆ ಸಖನ ನೆನಪಿನಲ್ಲೇ ನೆಲದಲ್ಲಿಯೇ ಉರುಳಿದ್ದಾಳೆ. ಅತಿಯಾದ ಪ್ರೀತಿ, ದುಃಖಗಳೆರಡನ್ನೂ ಇಲ್ಲಿ ತಿಳಿಯಬಹುದು. ರಾತ್ರಿ-ಹಗಲುಗಳು ಕಾಲ ಕಳೆಯುವ ಸಾಧನವಾಗಿವೆ. ಹಗಲಿಗೆ ಎದುರುವ ಹೆಣ್ಣು. ಇರುಳಿನಲ್ಲಿ ತನ್ನ ಮನಸ್ಸಿನ ತಳಮಳಗಳನ್ನು ಬಿಚ್ಚಿಡುತ್ತಾಳೆ.

ನೀನು ಹೋದ ಆ ಹೊತ್ತೆ ನಿದ್ದೆ ಚಿತ್ತೈಸೆ ಅವಳ ನೋಡಾ
ಮೇಘರಾಜ, ದಯೆಮಾಡಿ ತಡೆಯೊ ಹುಸಿ ಗುಡುಗು ಹಾಕಬೇಡಾ॥
ಹೇಗೋ ಕನಸಿನಲಿ ಸೇರಿ ನನ್ನ ಮುಗಿಬಿದ್ದು ಕೊರಳ ಹುಚ್ಚಿ
ಎದ್ದಾಳೊ ಬಾಲೆ ಬಿದ್ದಾಳೊ ಬೆದರಿ ಕೈ ಮಲಕು ಬಿಚ್ಚಿ ಬಿಚ್ಚಿ॥

ಅತ್ತು ಸೊರಗಿ ಹೋದ ತನ್ನಾಕೆ ಆಗ ತಾನೆ ಮಲಗಿರುತ್ತಾಳೆ. ನೀನು ಹೋಗಿ ಗುಡುಗು ಹಾಕಿದರೆ ಬೆಚ್ಚಿ ಎದ್ದಾಳೋ ಎಚ್ಚರಿಕೆಯಿಂದ ಅಲ್ಲಿ ತಡೆದು ನಿಲ್ಲಿಸು. ಕನಸಿನಲ್ಲಿ ನನ್ನ ನೆನಪಿನಲ್ಲೇ ನಿದ್ರಿಸುತ್ತಿರಬಹುದು. ಕ್ಷಣಿಕವಾದ ನಿದ್ರೆಯನ್ನು ಗುಡುಗಿಸಿ ಹಾಳು ಮಾಡದಿರು ಎಂದು ಭಿನ್ನೈಸಿಕೊಳ್ಳುತ್ತಿರುವನು.

ಹೀಗೆ ಕಾಮ ಎಂಬುದು ಮೂಲತಃ ಗಂಡು–ಹೆಣ್ಣುಗಳಲ್ಲಿ ಸೃಜನಶೀಲವಾಗಬೇಕು. ಬೇಂದ್ರೆಯವರ ಗಂಡು–ಹೆಣ್ಣಿನ ಕವನಗಳಲ್ಲಿ ಅರಿವು ಪ್ರಧಾನವಾಗಿರುವುದು. ವೈಚಾರಿಕ ಚೌಕಟ್ಟಿನಲ್ಲಿ ಮತ್ತು ಸಾಮಾಜಿಕ ಚೌಕಟ್ಟಿನಲ್ಲಿ ಬೇಂದ್ರೆಯವರ ಕವನಗಳು ಹೊಳೆಯುತ್ತವೆ. ಹೆಣ್ಣನ್ನು ಎಲ್ಲಿಯೂ ದಾಸಿಯಾಗಿ ಕಾಣದೆ ಸಖಿಯಾಗಿ ಕಂಡಿರುವುದು ಕವಿಯ ತಾಯ್ತನದ ಮನಸ್ಸನ್ನು ವ್ಯಕ್ತಪಡಿಸುತ್ತದೆ.

## ಸಮಾರೋಪ

ಬೇಂದ್ರೆಯವರ ಕಾವ್ಯಗಳು ಜೀವನದ ಜೀವನಾಡಿಗಳಾಗಿವೆ. ಸಮಾಜದ ಪರಿವರ್ತನೆಯ ಕೆಲಸದಲ್ಲಿ ಅವರ ಕಾವ್ಯಗಳು ಅಗ್ರಗಣ್ಯವೆನಿಸಿಕೊಂಡಿದೆ. ಮುಖ್ಯವಾಗಿ ಲೋಕ ಕಲ್ಯಾಣದ ಉದ್ದೇಶ ಒಳಗೊಂಡಿದೆ. ಅವರ ಕಾವ್ಯಗಳು ಪ್ರತಿಯೊಬ್ಬ ವ್ಯಕ್ತಿಯ ವೈಯಕ್ತಿಕ ಬದುಕಿಗೆ ತುಂಬಾ ಹತ್ತಿರವಾಗುತ್ತವೆ. ಇದರ ಮೂಲಕ ಬೇಂದ್ರೆಯವರು ಎಲ್ಲಾ ರಸಿಕ ಜನರ ಮನೆ ಮಾತಾಗಿದ್ದಾರೆ. 'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳು ಪ್ರಣಯ ಗೀತೆಗಳಾಗಿದ್ದು ಪ್ರೇಮ ತತ್ವಗಳನ್ನು ಸಾರುತ್ತವೆ. ಆದರೆ, ಒಟ್ಟಾರೆಯಾಗಿ ಈ ಕಾವ್ಯಗಳನ್ನು ವಿಮರ್ಶಿಸಿದಾಗ ಎಲ್ಲಾ ದಿಕ್ಕುಗಳಿಗೆ ತನ್ನ ಛಾಪು ತೋರುವುದು. ಸಾಮಾಜಿಕ ಕಾವ್ಯವಾಗಿ, ಅನುಭಾವದ ಕಾವ್ಯವಾಗಿ, ಆಧ್ಯಾತ್ಮಿಕ ದರ್ಶನ ನೀಡುವ ಕಾವ್ಯವಾಗಿ ಕನ್ನಡ ಸಾಹಿತ್ಯದಲ್ಲಿ ಕಂಗೊಳಿಸುತ್ತಿವೆ.

ಎರಡೂ ಕಾವ್ಯಗಳಲ್ಲಿ ಕಾಮ ಪರಿಪಕ್ವಗೊಂಡು ದಿವ್ಯ ಪ್ರೇಮವಾಗುವುದನ್ನು ಕಾಣುತ್ತೇವೆ. ಪ್ರೊ॥ ಆರ್.ಜಿ.ಕುಲಕರ್ಣಿಯವರು ಅಭಿಪ್ರಾಯ ಪಡುವಂತೆ, 'ಒಂದು ವ್ಯಕ್ತಿಯ ಸುಖ–ದುಃಖಗಳ ಪ್ರತಿಧ್ವನಿಯನ್ನು ಸಮಸ್ತ ಪ್ರಪಂಚದ ಕಾವ್ಯವಾಗಿ ಮಾಡಿದ್ದಾರೆ.

ಬೇಂದ್ರೆಯವರ ಎಲ್ಲಾ ಕಾವ್ಯಗಳು ರಸಿಕರ ಮನವನ್ನು ಗೆಲ್ಲಲು ಅವರಲ್ಲಿರುವ ಪ್ರೇಮ ತತ್ವವೇ ಕಾರಣ. ಮಾನವ ಪ್ರಪಂಚದಲ್ಲಿಯೇ ಅಲ್ಲದೇ, ಪಶು, ಪಕ್ಷಿ, ಪ್ರಾಣಿಯಲ್ಲಿಯೂ ಪ್ರೀತಿಯನ್ನು ತುಂಬುತ್ತಾರೆ.

'ಸಖೀಗೀತ' ಮತ್ತು 'ಮೇಘದೂತ' ಕಾವ್ಯಗಳ ರಚನೆಯನ್ನು ಕುರಿತು ಹೇಳುವುದಾದರೆ, ಅಲ್ಲಿ ಹೋಲಿಕೆಗಳಿಗಿಂತ ರೂಪಕಗಳನ್ನೇ ಕವಿ ಹೆಚ್ಚಾಗಿ ಬಳಸಿಕೊಂಡಿದ್ದಾರೆ. ಪ್ರತಿಮೆಗಳ ಬಳಕೆಯಿಂದ ಕಾವ್ಯದಲ್ಲಿನ ಧ್ವನಿ ವಿಶಿಷ್ಟ ರೀತಿಯಲ್ಲಿ ಧ್ವನಿಸುತ್ತದೆ. ಸುಮತೀಂದ್ರ ನಾಡಿಗರು ಬೇಂದ್ರೆಯವರ ರೂಪಕ ಸಾಮರ್ಥ್ಯವನ್ನು ಕುರಿತು 'ಬೇಂದ್ರೆಯವರ ರೂಪಕಗಳ ಭಾವ-ಗರ್ಭ-ಧಾರಣ-ಸಾಮರ್ಥ್ಯ ಎಷ್ಟಿರುತ್ತದೆ ಎಂದರೆ, ಅದರ ರೂಪಕಗಳು ಭಾವ ಸಾಮರ್ಥ್ಯವನ್ನೂ, ಗರ್ಭ ಸಾಮರ್ಥ್ಯವನ್ನೂ, ಧಾರಣ ಸಾಮರ್ಥ್ಯವನ್ನೂ ಒಟ್ಟಾಗಿ ಪಡೆದಿರುತ್ತದೆ' (ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು) ಎಂದು ಹೇಳುತ್ತಾರೆ. ಆದ್ದರಿಂದ ಬೇಂದ್ರೆಯವರ ಭಾಷಾ ಪ್ರತಿಭೆ ಮಾಲೆಗೆ ನಿಲುಕದ್ದಾಗಿದೆ. ಎಲ್ಲಾ ರೀತಿಯ ಭಾಷಾ ಪ್ರಯೋಗವನ್ನು ಬೇಂದ್ರೆಯವರ ಕಾವ್ಯಗಳಲ್ಲಿ ಕಾಣುತ್ತೇವೆ.

ಬಡತನದಲ್ಲಿ ಹುಟ್ಟಿ ಬಡತನದಲ್ಲಿಯೇ ಬೆಳೆದು ಬಡತನದಲ್ಲಿಯೇ ಕಣ್ಮರೆಯಾದ ಅವರ ವೈಯಕ್ತಿಕ ಜೀವನ ಕಾವ್ಯಕ್ಕಿಂತ ಬೇರೆಯಾಗಿ ಕಾಣುವುದಿಲ್ಲ. ಬದುಕನ್ನೇ ಅವರು ಕಾವ್ಯವಾಗಿಸಿದ್ದಾರೆ. ಕಷ್ಟ-ಸುಖಗಳ ಸಮರಸ ಜೀವನವನ್ನು ತಾವು ಉಂಡು ಲೋಕಕ್ಕೂ ಉಣಬಡಿಸುತ್ತಾರೆ. ಬೇಂದ್ರೆಯವರ ಕಾವ್ಯಗಳನ್ನು ಓದುವ ಯಾವುದೇ ರಸಿಕ ಮನಸ್ಸು ಅವರ ಕಾವ್ಯಗಳಿಗೆ ಮನಸೋಲದೆ ಇರದು. ಅವರ ಒಲುಮೆಗೆ ಎಲ್ಲಾ ಮನಸ್ಸುಗಳು ತಲೆದೂಗಲೇ ಬೇಕು. ಕ್ರಿಯಾಶೀಲತೆ, ಸೃಜನಶೀಲತೆ, ವಿಕಾಸಶೀಲತೆ, ಎಲ್ಲವನ್ನು ಒಳಗೊಂಡಿರುವ ಅವರ ಕಾವ್ಯಗಳು ಬೇಂದ್ರೆಯವರ ಪ್ರತಿಭೆಗೆ ಕನ್ನಡಿ ಹಿಡಿದಂತಿವೆ. ಶ್ರೀಮಂತಿಕೆಗಿಂತ ಪ್ರೀತಿಗೆ ಹೆಚ್ಚು ಮಾನ್ಯತೆ ನೀಡುತ್ತಿದ್ದ ಬೇಂದ್ರೆಯವರು ಹಣವನ್ನು ಬದುಕೆಂದು ಎಂದೂ ಭಾವಿಸಿದವರಲ್ಲ. ಸ್ವಾಭಿಮಾನಿಯಾಗಿಯೇ ಕೊನೆಯವರೆಗೂ ಉಳಿದರು. ತಮ್ಮ ವ್ಯಕ್ತಿತ್ವದ ಯಾವುದೇ ಕ್ಷೇತ್ರಕ್ಕೂ ಕುಂದುಂಟಾಗದ ಹಾಗೆ ಬದುಕು ಸಾಗಿಸಿದರು. ಪ್ರೀತಿಯ ಪಯಣದ ಅವರ ಪ್ರೇಮಗೀತೆಗಳು ಸದಾ ಕನ್ನಡ ಸಾಹಿತ್ಯದಲ್ಲಿ ತಾರೆಗಳಂತೆ ಮಿನುಗುತ್ತಲೇ ಇರುವುದು.

# ಪರಿವಿಡಿ

1. ಅಧ್ಯಾಯ - ಒಂದು

   ಅಧ್ಯಯನದ ಉದ್ದೇಶ ವ್ಯಾಪ್ತಿ ಹಾಗೂ ತಾತ್ವಿಕ ಸ್ವರೂಪ

2. ಅಧ್ಯಾಯ - ಎರಡು

   ಭಾಷಿಕ - ಸ್ವರೂಪ

3. ಅಧ್ಯಾಯ – ಮೂರು

   'ಸಖೀಗೀತ' ಮತ್ತು 'ಮೇಘದೂತ'ದ ವಸ್ತು ಮತ್ತು ಆಶಯ

4. ಅಧ್ಯಾಯ - ನಾಲ್ಕು

   ವಸ್ತು ವಿನ್ಯಾಸ ಮತ್ತುಸೌಂದರ್ಯಾನುಭವ

5. ಅಧ್ಯಾಯ - ಐದು

   ಬೇಂದ್ರೆ ಕಾವ್ಯದಲ್ಲಿ ಪ್ರತಿಮೆ, ರೂಪಕಗಳ ಬಳಕೆ – ಒಂದು ವಿಶ್ಲೇಷಣೆ

6. ಅಧ್ಯಾಯ - ಆರು

   'ಸಖೀಗೀತ' ಮತ್ತು 'ಮೇಘದೂತ' ದಲ್ಲಿ 'ಸ್ತ್ರೀ'

7. ಸಮಾರೋಪ

# ಪರಾಮರ್ಶನ ಗ್ರಂಥಗಳು

1. ಜಿ.ಎಸ್. ಆಮೂರ – ಭುವನದ ಭಾಗ್ಯ, ಸ್ನೇಹ ಪ್ರಕಾಶನ, ಬೆಂಗಳೂರು

2. ಬೇಂದ್ರೆ ಸಾಹಿತ್ಯ ಸಮಾಲೋಚನೆ – ಸಂಪಾದಕ ಡಾ॥ ರಾಗೌ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

3. ಬೇಂದ್ರೆ ಕಾವ್ಯ – ಸಂಪಾದಕರು : ಡಾ॥ ಜಿ.ಎಸ್. ಆಮೂರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

4. ಬಹುಮುಖ ಪ್ರತಿಭೆಯ ಬೇಂದ್ರೆ – ಎನ್.ಕೆ.ಕುಲಕರ್ಣಿ, ಶ್ರೀ ಪ್ರೇಮಾಸಾಯಿ ಪ್ರಕಾಶನ, ಬೆಂಗಳೂರು – 560 040.

5. ಬೇಂದ್ರೆ ಕಾವ್ಯದಲ್ಲಿ ಸಖ್ಯ – ರೇಣುಕಾ ಶ್ರೀಪಾದ ಬಾದಾ, ಸಿಂಚನ ಪ್ರಕಾಶನ.

6. ಬೇಂದ್ರೆಯವರ ಕಾವ್ಯದ ವಿಭಿನ್ನ ನೆಲೆಗಳು – ಸುಮತೀಂದ್ರ ನಾಡಿಗ, ಪ್ರಕಾಶಕರು – ಕರ್ನಾಟಕ ಬುಕ್ ಏಜೆನ್ಸಿ, ಗಾಂಧಿನಗರ, ಬೆಂಗಳೂರು– 560 009.

7. ಅಂಬಿಕಾತನಯದತ್ತರ – ಮೇಘದೂತ (ಮೂಲ ಹಸ್ತ ಪ್ರತಿಗಳೊಂದಿಗೆ) ಸಂಪಾದಕರು – ಡಾ॥ ವಾಮನ ಬೇಂದ್ರೆ, ಪ್ರಕಾಶಕರು – ಡಾ॥ ಕೆ.ಎಸ್.ಶರ್ಮಾ, ಶ್ರೀಮಾತಾ ಪ್ರಕಾಶನ, ಹುಬ್ಬಳ್ಳಿ – 20.

8. ಕಾಳಿದಾಸ ಪ್ರಕಾಶನ, ಸಿ.ಪಿ.ಕೆ. ಅಖಿಲಾ ಏಜೆನ್ಸೀಸ್, ಮೈಸೂರು – 570 013.

9. ಶಕ್ತಿ ಶಾರದೆಯ ಮೇಳ – ಡಿ.ಆರ್. ನಾಗರಾಜ್, ಅಕ್ಷರ ಪ್ರಕಾಶನ, ಹೆಗ್ಗೋಡು, ಬೆಂಗಳೂರು – 560 033.

10. ಶ್ರೀ ಬೇಂದ್ರೆಯವರ ಜೀವನ ಪರಿಚಯ – ಡಾ॥ ವಾಮನ ಬೇಂದ್ರೆ, ಪ್ರಕಾಶಕರು – ಸಮಾಜ ಪುಸ್ತಕಾಲಯ, ಧಾರವಾಡ (ಒಂದನೇ ಆವೃತ್ತಿ – 1977).

11. ಧಾರವಾಡದ ಮರೆಯಲಾಗದ ಮಹಾನೀಯರು, ಸಂಪಾದಕರು – ನ.ಹ.ಕಟಗೇರಿ, ಪ್ರಕಾಶನ – ಶರದ್, ಧಾರವಾಡ.

12. ಸಾಹಿತ್ಯ ರತ್ನ ಸಂಪುಟ, ಎಸ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಪ್ರಕಾಶಕರು – ವಸಂತ ಪ್ರಕಾಶನ, (ಮೊದಲ ಮುದ್ರಣ–2004).

13. ಪ್ರತಿಭಾ ಸಂದರ್ಶನ – ರಾಮಚಂದ್ರ ಶರ್ಮ, ಪ್ರಕಾಶಕರು – ಸುಮತಿ, ಬೆಂಗಳೂರು (ಮೊದಲ ಮುದ್ರಣ – 1975).

